# ಅಚಲ

ಮೇ 2000

ತಿಂಗಳ ಪತ್ರಿಕೆ

ಒಳಗೇನಿದೆ ?



ಜಾಗೃತಿ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 14 ಸಂಚಿಕೆ4/5

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಬಿ. ಎನ್. ಸುಮಿತ್ರಾಬಾಯಿ
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by
Dr. N. Gayathri**

**Published by
Dr. G. Ramakrishna on
behalf of Jagruthi Mahila
Adhyayana Kendra**

***Printed at***
**Lipi Mudrana
Bangalore - 560 004**


ಆತ್ಮೀಯರೇ,

ಕಳೆದ 14 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

**ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.**

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಗಮನಿಸಿ
ಅಚಲ ವಿಳಾಸ ಬದಲಾಗಿದೆ
108, ಸ್ಕೈಲೈನ್ ಸುರಭಿ, 14-ಬಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಸಾಂಸ್ಕೃತಿಕ ಭಯೋತ್ಪಾದನೆ

ಇಪ್ಪತ್ತು ವರ್ಷಗಳ ಹಿಂದೆ ಇರಾನಿನಲ್ಲಿ ಇಸ್ಲಾಮಿಕ್ ಕ್ರಾಂತಿಯಾಯಿತು, ಮಹಿಳೆಯನ್ನು ಹತ್ತಿಕ್ಕುವಲ್ಲಿ ಯಶಸ್ವಿಯಾಯಿತು. ಇಂದಿಗೂ ಇರಾನಿನ ಅನೇಕ ಸಂಸ್ಥೆಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ, ವಿಮಾನ ನಿಲ್ದಾಣಗಳಲ್ಲಿ ಮಹಿಳೆಯರಿಗೆ ಪ್ರತ್ಯೇಕ ದ್ವಾರವಿದ್ದು, ಅಲ್ಲಿ ಅವರು ಉಡುಪಿನ ನಿಯಮವನ್ನೇನಾದರೂ ಉಲ್ಲಂಘಿಸಿದ್ದಾರೆಯೇ ಎಂದು ಪರೀಕ್ಷಿಸಲಾಗುವುದು. ಮಹಿಳೆ ಮುಖ ಮತ್ತು ಕೈ ಬಿಟ್ಟು ಉಳಿದೆಲ್ಲ ಭಾಗವನ್ನು ಪೂರ್ಣ ಮುಚ್ಚಿಕೊಳ್ಳುವುದು ಇಲ್ಲಿ ಕಡ್ಡಾಯ. ವಿಶ್ವವಿದ್ಯಾಲಯ ಓರ್ವ ಮಹಿಳಾ ಪ್ರೊಫೆಸರ್, ಕಪ್ಪು ಹಲಗೆಯ ಮೇಲೆ ಬರೆಯುವಾಗ ಮಣಿಕಟ್ಟು ಕಾಣಿಸಿತೆಂದು, ಆಕೆಯನ್ನು ಕೆಲಸದಿಂದ ತೆಗೆದು ಹಾಕಿದ ಘಟನೆ ಇಲ್ಲಿ ನಡೆದಿದೆ. ಮಹಿಳೆಯರ ಬದುಕಿನ ಎಲ್ಲ ಆಯಾಮಗಳನ್ನು ನಿಯಂತ್ರಿಸುವ, ಹತ್ತಿಕ್ಕುವ ಪ್ರಯತ್ನವಿದೆ. ಕ್ರಾಂತಿಗೆ ಮೊದಲು ಇರಾನಿನಲ್ಲಿ ಮಹಿಳೆಯರು ಎಲ್ಲ ರಂಗದಲ್ಲಿಯೂ ಸಕ್ರಿಯರಾಗಿದ್ದರು, ಅವರಿಗೆ ಪ್ರೋತ್ಸಾಹವಿತ್ತು. ಮಹಿಳಾ ಪೋಲಿಸ್ ಅಧಿಕಾರಿಗಳಿದ್ದರು, ನ್ಯಾಯಾಧೀಶರಿದ್ದರು, ವಿಮಾನ ಚಾಲಕಿಯರಿದ್ದರು. 1978ರಲಿ 22 ಮಹಿಳೆಯರು ಪಾರ್ಲಿಮೆಂಟಿನ ಸದಸ್ಯರಾಗಿದ್ದರು, ಇಬ್ಬರು ಸೆನೆಟ್‌ನಲ್ಲಿ ಕುಳಿತಿದ್ದರು. 'ಈ ಮಹಿಳೆಯರು ಇರಾನಿನ ಸಂಸ್ಕೃತಿ ಮತ್ತು ಸಂಪ್ರದಾಯಕ್ಕೆ ದ್ರೋಹ ಬಗೆದಿದ್ದಾರೆ' ಎಂದು ಆಯತುಲ್ಲಾ ಖೊಮಿನಿ ಆರೋಪಿಸಿದರು. ಡಾ॥ ಫರೂಕ್ರು ಪಾರ್ಸ್ ಎಂಬ ವೈದ್ಯೆ, ಟೆಹ್ರಾನಿನ ಹೆಣ್ಣು ಮಕ್ಕಳ ಶಾಲೆಯಲ್ಲಿ ಪ್ರಾಂಶುಪಾಲರಾಗಿದ್ದಳು. ಡಾ. ಫರೋಕ್ರು ಇರಾನಿನ ಮೊಟ್ಟ ಮೊದಲ ಮಹಿಳಾ ಕ್ಯಾಬಿನೆಟ್ ಮಂತ್ರಿ. ಕ್ರಾಂತಿಯಾದೊಡನೆ ಈಕೆಯನ್ನು 'ದೇವರ ವಿರುದ್ಧ ಯುದ್ಧ ಮಾಡಿದಳು' ಎಂದು ದೂರಿ, ಅನೇಕ ಆರೋಪಗಳನ್ನು ಹೇರಿ, ಡಿಫೆನ್ಸ್ ವಕೀಲರನ್ನೂ ನೀಡದೆ ವಿಚಾರಣೆ ಮುಗಿಸಿ, ಮರಣ ದಂಡನೆ ವಿಧಿಸಿ ಕೊಂದರು. ಸಾರ್ವಜನಿಕ ರಂಗದಿಂದ ಮಹಿಳೆಯರನ್ನು ಹೊರದೂಡಲು ಖೊಮಿನಿ ಯತ್ನಿಸಿದ್ದು ಅಚ್ಚರಿಯಲ್ಲ. ಒಂದೇ ಏಟಿಗೆ ಖೊಮಿನಿ ಇರಾನಿನ ಮಹಿಳೆಯರನ್ನು ಶತಮಾನಗಳಷ್ಟು ಹಿಂದಕ್ಕೆ ಎಳೆದೊಯ್ದರು. ಹೆಣ್ಣು ಮಕ್ಕಳು 'ವಿವಾಹಕ್ಕೆ ಒಪ್ಪಿಗೆ ನೀಡುವ-ವಯಸ್ಸನ್ನು ಹದಿನೆಂಟರಿಂದ ಒಂಭತ್ತಕ್ಕೆ ಇಳಿಸಲಾಯಿತು. 1967ರಲ್ಲಿ ಜಾರಿಗೆ ಬಂದ 'ಕುಟುಂಬ ರಕ್ಷಣಾ ಕಾನೂನು' ಮಹಿಳೆಗೆ, ಮನೆಯಿಂದ ಹೊರಗೆ ದುಡಿಯಲು ಸಹಾಯಕವಾಗಿತ್ತು ಮತ್ತು ಮಹಿಳೆಗೆ ವಿವಾಹದಲ್ಲಿ ಹೆಚ್ಚಿನ ಹಕ್ಕುಗಳನ್ನು ನೀಡಿತ್ತು. ಈ ಕಾನೂನನ್ನು ರದ್ದು ಮಾಡಲಾಯಿತು, ಅದರ ಜಾಗದಲ್ಲಿ ಸಾಂಪ್ರದಾಯಿಕ ಇಸ್ಲಾಂ ಕಾನೂನು ಜಾರಿಗೆ ಬಂದಿತು. ನ್ಯಾಯಾಲಯದಲ್ಲಿ ಒಬ್ಬ ಗಂಡಸಿನ ಸಾಕ್ಷಿ, ಇಬ್ಬರು ಹೆಂಗಸರ ಸಾಕ್ಷಿಗೆ ಸಮನೆಂದರು. ಇದೀಗ ಮಹಿಳೆಗೆ ಬುರಕಾ ಇಲ್ಲದೆ ಹೊರಗೆ ಹೋಗುವಂತಿರಲಿಲ್ಲ. ಕಪ್ಪು ಬಟ್ಟೆಯಲ್ಲಿ ತಲೆಯಿಂದ ಪಾದದವರೆಗೆ, ಹಸ್ತದವರೆಗೆ ಮುಚ್ಚಿಕೊಳ್ಳುವುದು ಮಹಿಳೆಯರಿಗೆ ಕಡ್ಡಾಯ. ಮಹಿಳೆಯರು ಪ್ರತಿಭಟಿಸಿದರು. ಬುರಕಾ ಹಾಕದ ಮಹಿಳೆಯರ ಮೇಲೆ ಆಸಿಡ್ ಎಸೆದ ಉಗ್ರ ಪ್ರಸಂಗಗಳಿದ್ದವು. ಪ್ರತಿಭಟಿಸಿದ ಮಹಿಳೆಯರನ್ನು ಚಚ್ಚಿ ಹಾಕಿದರು. ಸಾಲದೆಂದು ಸರಕಾರ 'ನೈತಿಕ ಅಪರಾಧ' ಮಾಡಿದವರ ಮೇಲೆ ಗಮನ ಇಡಲು ವಿಶೇಷ 'ವೈಸ್ ಸ್ಕ್ವಾಡ್' ನೇಮಿಸಿತು. ಈ ಗಾರ್ಡ್‌ಗಳು ಸಾರ್ವಜನಿಕ ಸ್ಥಾನಗಳಲ್ಲಿ ಮಾತ್ರವಲ್ಲ, ಖಾಸಗಿ ಮನೆಗಳಿಗೂ ನುಗ್ಗಿ, ಪರ್ದಾ ಇಲ್ಲದ ಮಹಿಳೆಯರಿದ್ದಾರೆಯೆ, ಗಂಡಸರು-ಹೆಂಗಸರು ಕೂಡಿರುವ ಪಾರ್ಟಿಗಳಿವೆಯೆ ಎಂದು ಹುಡುಕತೊಡಗಿದರು. ಬೀದಿಯಲ್ಲಿ ಹುಡುಗ-ಹುಡುಗಿ ಜೊತೆಯಾಗಿ ಹೋಗುವುದೂ ಅಪರಾಧವಾಗಬಲ್ಲದು, ಅವರನ್ನು ಬಂಧಿಸಬಹುದು.

1997ರಲ್ಲಿ, ಅತಿಗೆ ಹೋಗದ ಮಿತಗಾಮಿ ಮೊಹಮ್ಮದ್ ಕಠಾಮಿ ಅಧ್ಯಕ್ಷರಾಗಿ ಚುನಾಯಿತರಾದ ಮೇಲೆ ಇರಾನಿನಲ್ಲಿ ಒಂದಿಷ್ಟು ಹೊಸ ಗಾಳಿ ಬೀಸಿ ಬಂದಿದೆ. ಆದರೆ ಆಫ್ಘಾನಿಸ್ತಾನದ ಹೆಂಗಸರ ಪಾಡನ್ನು ಕೇಳುವವರಿಲ್ಲ. ಹೆಂಗಸರು ಬುರಕಾ ಹಾಕುವುದಿರಲಿ, ಅವರಿಗೆ ದುಡಿಯುವ ಹಕ್ಕಿಲ್ಲ, ಕಲಿಯುವ ಹಕ್ಕೂ ಇಲ್ಲ. ಹಾಗೆಂದು ಗಂಡಸರಿಗೆ ಸಂಪೂರ್ಣ ಸ್ವಾತಂತ್ರವಿದೆಯೆಂದಲ್ಲ, ಅವರ ಗಡ್ಡದ ಅಳತೆಯನ್ನೂ ನಿಯಂತ್ರಿಸುವ ಸರಕಾರ !

ಇಷ್ಟೆಲ್ಲವೂ ಯಾವುದೋ ಇಸ್ಲಾಮಿಕ್ ದೇಶದಲ್ಲಿ ನಡೆಯುವ ವಿಪರೀತಗಳೆಂದು ಇಲ್ಲಿಯವರೆಗೂ ಆರಾಮಿದ್ದ ಭಾರತೀಯರು ಎಚ್ಚೆತ್ತುಕೊಳ್ಳಬೇಕು. ಸಂಸ್ಕೃತಿಯ ಅತಿರೇಕಗಳಿಗೆ ಹಿಂದು-ಮುಸ್ಲಿಂ ಎಂಬ ಭೇದವಿಲ್ಲ. ಸಂಸ್ಕೃತಿಯ ಹೆಸರಿನಲ್ಲಿ ಮಹಿಳೆಯರನ್ನು ತುಳಿಯುವ, ಯುವಜನರ ಸ್ವಾತಂತ್ರವನ್ನು ಮೆಟ್ಟುವ ಪ್ರಯತ್ನಗಳು ನಡೆದಿವೆ. ತಮ್ಮ ಮೂಗಿನ ನೇರದ ನೈತಿಕ ನಿಯಮಗಳನ್ನು ಎಲ್ಲರ ಮೇಲೆ ಹೇರುವ ಪ್ರಯತ್ನ. ಪರಿಪಾಲಿಸದಿದ್ದರೆ ಶಿಕ್ಷಿಸುವ ಯತ್ನ. ಈ ಸಾಂಸ್ಕೃತಿಕ ಭಯೋತ್ಪಾದಕರು, ಕಶ್ಮೀರಿ ಭಯೋತ್ಪಾದಕರಿಗಿಂತಾ ಭಯಂಕರ. ಕಾರಣ ಇವರು ಎಲ್ಲೆಡೆಯಲ್ಲೂ ಇರುವವರು, ಕಿಂಚಿತ್ತು ಗಾಳಿ ಬೀಸಿದರೆ ಸಾಕು, ಕಿಡಿಯನ್ನು ಕಾಡ್ಗಿಚ್ಚು ಮಾಡಬಲ್ಲವರು.

1997ರಲ್ಲಿ ಬೆಂಗಳೂರಿನ ಕ್ರೈಸ್ತ ಕಾಲೇಜ್, ಹುಡುಗಿಯರಿಗೆ ಜೀನ್ಸ್ ನಿಷೇಧಿಸಿತು. ಹುಡುಗರಿಗೆ ಈ ನಿಬಂಧನವಿರಲಿಲ್ಲ. ಹುಡುಗಿಯರಿಗೆ ಜೀನ್ಸ್ ಅಸಭ್ಯ ಎಂದ ವಾದ! ನಮ್ಮ ಕಾಲಕ್ಕೆ ಸೀರೆ ಹಾಕುವುದು ಬಿಟ್ಟು ಸಲ್ವಾರ್ ಕಮೀಜ್ ಹಾಕಿದ್ದೂ ಅಸಭ್ಯವಾಗಿ ಕಂಡಿತ್ತು. ಇಂದು, ಇಷ್ಟುದ್ದದ ಸಲ್ವಾರ್ ಕಮೀಸ್-ದುಪ್ಪಟ್ಟಾಗಿಂತ, ಪ್ಯಾಂಟ್-ಶರ್ಟ್, ಜೀನ್ಸ್, ದಿನದಿನದ ಚಟುವಟಿಕೆಗೆ ಹೆಚ್ಚು ಆರಾಮ ಕಂಡರೆ ಅಚ್ಚರಿ ಅಲ್ಲ. ಆರಾಮವನ್ನು, ಅನುಕೂಲವನ್ನು ಬಯಸುವ ಯುವಜನ, ಸೀರೆ-ಸೆಲ್ವಾರ್ ಕಮೀಜಗಳಲ್ಲಿ ಸಿಕ್ಕಿ ಹಾಕಿಕೊಳ್ಳದೆ ಜೀನ್ಸ್ ಧರಿಸಿದರೆ ದೊಡ್ಡ ಅಪರಾಧವಲ್ಲ. ಅಂತೂ ಸಾಕಷ್ಟು ಗಲಾಟೆಯ ನಡುವೆ ಈ ನಿಷೇಧವನ್ನು ಕೈಬಿಡಲಾಯಿತು. ಆದರೆ ಬೆಂಗಳೂರಿನಲ್ಲಾದಷ್ಟು ಸುಲಭವಾಗಿ ಕಾನ್ಪುರದ ಹುಡುಗಿಯರಿಗೆ ಬಿಡುಗಡೆ ಇಲ್ಲ. ಕಾರಣ, ಇಂದು ದೇಶದಲ್ಲಿ ಸಾಂಸ್ಕೃತಿಕ ಭಯೋತ್ಪಾದಕ ವಾತಾವರಣ ಮೂಡಿದೆ. ಕೆಲವೇ ವರ್ಷಗಳ ಹಿಂದೆ ಹಿಂದೂಗಳು ಕ್ರಿಶ್ಚಿಯನ್ನರ ಮೇಲೆ ಆಕ್ರಮಣ ಮಾಡುವುದನ್ನು ಊಹಿಸಲೂ ಸಾಧ್ಯವಿರಲಿಲ್ಲ. ಹಿಂದು ಮುಸ್ಲಿಂ ಗಲಭೆಯೊಂದೇ ತಿಳಿದ ನೆಲದಲ್ಲಿ, ಇದೀಗ ಎಲ್ಲ ಧರ್ಮಗಳೊಡನೆಯೂ ಭುಗಿಲೆದ್ದ ಅಸಹನೆ, ಹಿಂಸೆಯ ಹಲವು ಹತ್ತು ಮುಖಗಳು ತೆರೆದುಕೊಂಡಿವೆ.

ಇಂದು ಕಾನ್ಪುರದಲ್ಲಿ ಹೆಚ್ಚು ಕಮ್ಮಿ ಎಲ್ಲ ಮಹಿಳಾ ಕಾಲೇಜುಗಳೂ 'ಅಖಿಲ ಭಾರತೀಯ ವಿದ್ಯಾರ್ಥಿ ಪರಿಷದ್'ನ 'ಉಡುಪಿನ ನಿಯಮ'ವನ್ನು ಅಳವಡಿಸಿವೆ. ಅದರ ಪ್ರಕಾರ ಹುಡುಗಿಯರು ಕಾಲೇಜಿಗೆ ಜೀನ್ಸ್ ಆಗಲಿ, ಸ್ಕರ್ಟ್ ಆಗಲಿ ಹಾಕುವಂತಿಲ್ಲ. ಇದು ಕಾನ್ಪುರದ ಯಾವುದೋ ಮೂಲೆಯಲ್ಲಿ ನಡೆಯುವ ನಿಯಮವೆಂದು ಸುಮ್ಮನೆ ಕೂರಬೇಡಿ. ಸಾಂಸ್ಕೃತಿಕ ಭಯೋತ್ಪಾದನೆಯ ಕಿಡಿ ಕಾಡ್ಗಿಚ್ಚಿನಂತೆ ಇಡೀ ಭಾರತವನ್ನು ಸುಡಬಲ್ಲದು. ಜೀನ್ಸ್ ಕೂಡದು ಎಂದು ಹೇಳಿದ್ದೇ ಸಾಕು, ಇಂಥಾ ಸಮಯಕ್ಕೇ ಕಾದ ಕೆಲ ಸಂಪ್ರದಾಯವಾದಿ ಪ್ರೊಫೆಸರುಗಳು, ನಿಯಮವನ್ನು ಮತ್ತಷ್ಟು ಹಿಗ್ಗಿಸಿ, 'ಹೆಣ್ಣು ಮಕ್ಕಳು ಲಿಪ್‌ಸ್ಟಿಕ್ ಹಾಕಬಾರದು' ಎಂದು ಹೇಳ ತೊಡಗಿದ್ದಾರೆ ! ನಾಳೆ ಪೌಡರ್ ಹಚ್ಚಬಾರದು, ಕಾಡಿಗೆ ತೀಡಬಾರದು, ತಲೆಯ ಮೇಲೆ ಸೆರಗು ಹೊದ್ದು ಬನ್ನಿ ಎಂದು ಹೇಳಿದರೆ ಅಚ್ಚರಿ ಪಡಬೇಡಿ. ಇವರು ನಿಯಂತ್ರಿಸುತ್ತಿರುವುದು ಕೇವಲ ಉಡುಪನ್ನಲ್ಲ, ನಮ್ಮ ಜೀವನ ವಿಧಾನವನ್ನು, ಯೋಚನಾ ಕ್ರಮವನ್ನು. ಇದು ಕೇವಲ ಹೆಂಗಸರಿಗಷ್ಟೇ ಸೀಮಿತವಾಗುತ್ತದೆ ಎಂದು ಕೂಡಾ ಭಾವಿಸಬೇಡಿ. ಸಂಸ್ಕೃತಿಯ ತಪ್ಪು ಪರಿಕಲ್ಪನೆಗಳು ಗಂಡಸರಿಗೆ ವಿಸ್ತರಿಸಲು ಹೆಚ್ಚು ಸಮಯ ಹಿಡಿಯುವುದಿಲ್ಲ. ಆದಾಗಲೆ ಸ್ಟೂಡೆಂಟ್ಸ್ ಇಸ್ಲಾಮಿಕ್ ಮೂವ್‌ಮೆಂಟ್, ಹುಡುಗರು ಶೇರ್ವಾಣಿ ಹಾಕಿದರೆ ಚಂದ ಎನ್ನತೊಡಗಿದೆ.

ಕಾಲೇಜುಗಳಿಗೆ ಒಂದು ಡ್ರೆಸ್ ಕೋಡ್ ಬೇಕು ಎಂದರೆ, ಎಂಥಾ ಡ್ರೆಸ್ ಕೋಡ್ ಎಂದು ನಿರ್ಧರಿಸುವವರಾರು ? ಕೆಲವು ಕಾರ್ಖಾನೆಗಳಲ್ಲಿ, ಹೆಂಗಸರು ಸೀರೆ ಉಡಬೇಕು ಎಂದು ಗಂಡಸರು ನಿರ್ಧರಿಸುತ್ತಾರೆ ! ಸಂಸ್ಕೃತಿಯ ಪರಿಪಾಲಕರಾದ ತಾವು ಪಂಚೆ ಧರಿಸಬಾರದೇಕೆ ಎಂದು ಯೋಚಿಸುವುದಿಲ್ಲ. ನಿಜಕ್ಕೂ ಕಾಲೇಜಿಗೊಂದು 'ಡ್ರೆಸ್ ಕೋಡ್' ಬೇಕೆನಿಸಿದರೆ, ಎಂಥಾ ಉಡುಪನ್ನು ಧರಿಸಬೇಕು ಎಂಬುದನ್ನು ಕಾಲೇಜಿನ ಪ್ರಾಧ್ಯಾಪಕರು, ವಿದ್ಯಾರ್ಥಿಗಳು ಒಟ್ಟಿಗೆ ಕಲೆತು, ಸಹಮತದಿಂದ ಸೂಕ್ತವೆನಿಸಿದ್ದನ್ನು ಆಯ್ದು ನಿರ್ಧರಿಸಬೇಕು. ಆದರೆ ಕೆಲವು ಸಂಪ್ರದಾಯವಾದಿಗಳ ದೃಷ್ಟಿಯ 'ಸಭ್ಯ ಉಡುಪ'ನ್ನು ಉಳಿದೆಲ್ಲರೂ ತೊಡಬೇಕೆಂಬ ಕಡ್ಡಾಯ ಸರಿಯೆ ? ಡ್ರೆಸ್ ಕೋಡ್ ಉಲ್ಲಂಘಿಸಿದರೆ ಬೆದರಿಸುವುದು ಎಂಥಾ ಸಂಸ್ಕೃತಿ ? ಇವರಿಗೆ ಇಂಥಾ 'ನೈತಿಕ ಪೋಲೀಸು'ಗಾರಿಕೆಯ ಹಕ್ಕು ನೀಡಿರುವವರಾರು ? ಇಂದು ಕಾಲೇಜಿನಲ್ಲಿ ಹೆಣ್ಣು ಮಕ್ಕಳ ಉಡುಗೆಯ ನಿಯಂತ್ರಣ, ನಾಳೆ ಕೆಲಸ ಮಾಡುವ ಸ್ಥಳಗಳಿಗೂ, ಸಾರ್ವಜನಿಕ ಸ್ಥಾನಗಳಿಗೂ ಹರಡುತ್ತದೆ. ಒಮ್ಮೆ ಹುಲಿಸವಾರಿ ಹೊರಟರೆ, ಇಳಿಯುವುದು ಸುಲಭವಲ್ಲ. ಸರ್ವಧರ್ಮ ಸಹಿಷ್ಣುತೆಯ ಗುಣ ಮರೆಯಾಗಿ ಅಪ್ಪಟ ಅಸಹೆ, ಬೆದರಿಕೆ ಮತ್ತು ಭಯೋತ್ಪಾದಕತೆಯೇ ನಮ್ಮ ಧೋರಣೆಯಾಗಿ, ನಾವು ಇರಾನ್, ಆಫ್ಘಾನಿಸ್ತಾನದ ಹಾದಿಯಲ್ಲಿ ಹೆಜ್ಜೆಗಳನ್ನಿಡುತ್ತಿದ್ದೇವೆ ಎಂದರೆ ಉತ್ಪ್ರೇಕ್ಷೆಯಲ್ಲ. ಪರದೇಶದ ಬಹುರಾಷ್ಟ್ರೀಯ ಕಂಪನಿಗಳಿಗೆಲ್ಲ ಧಾರಾಳ ಬಾಗಿಲು ತೆರೆದು, ನಮ್ಮ ಸಂಸ್ಕೃತಿಯನ್ನು ಕೇವಲ ಸೀರೆ, ಸಲ್ವಾರ್‌ಗಳಲ್ಲಿ ಉಳಿಸಿಕೊಳ್ಳ ಹೊರಟಿದ್ದೇವೆ.

ಇಂದು ಯುವಜನರನ್ನು ಕಾಡುತ್ತಿರುವ ಸಮಸ್ಯೆಗಳು ನೂರಾರಿವೆ. ಕಳಪೆ ಕಾಲೇಜುಗಳು, ನಿರುದ್ಯೋಗ, ಒಂದೆಡೆ ತಿಂಗಳಿಗೆ ಅರ್ಧಲಕ್ಷ ಸಂಬಳ ತೆಗೆದುಕೊಳ್ಳುವ ಸಾಫ್ಟ್‌ವೇರ್ ಇಂಜಿನಿಯರುಗಳು, ಇನ್ನೊಂದೆಡೆ ಸಾವಿರದ ಕೆಲಸ ಕೂಡಾ ಸಿಗದ ಪದವೀಧರರು. ಇಂಥಾ ಏರು ಪೇರಿನ ಸಮಾಜದ ನೂರು ನಿಜ ಸಮಸ್ಯೆಗಳಿರುವಾಗ, ಸಂಘ ಸಂಸ್ಥೆಗಳು ಸಲ್ವಾರ್-ಜೀನ್ಸ್ ಹಿಡಿದು ಅಡ್ಡಾಡುತ್ತಿರುವುದು ವಾಸ್ತವಕ್ಕೆ 'ಪರ್ದಾ' ಹಾಕುವ ಯತ್ನವಾಗಿ ಕಾಣುತ್ತದೆ. ನಾವು ತೊಡುವ ಬಟ್ಟೆಯನ್ನು, ಬದುಕುವ ರೀತಿಯನ್ನು, ಕಡೆಗೆ ನಮ್ಮ ಯೋಚನಾ ಸರಣಿಯನ್ನೇ ನಿಯಂತ್ರಿಸಲು ಹೊರಟ ಜನರಿಂದ ಎಚ್ಚರವಿರಬೇಕಿದೆ.

\- ನೇಮಿಚಂದ್ರ

# ಸೀಡಾ (CEDAW) - ಒಂದು ಪರಿಚಯ

## ಮಹಿಳೆಯರನ್ನು ಕುರಿತ ಎಲ್ಲ ರೀತಿಯ ಪಕ್ಷಪಾತ ನಿವಾರಣೆಯ ಒಪ್ಪಂದ

ಮಹಿಳೆಯರ ಮೇಲಿನ ಎಲ್ಲ ರೀತಿಯ ಪಕ್ಷಪಾತಗಳನ್ನು ನಿವಾರಿಸುವ ಅಂತರರಾಷ್ಟ್ರೀಯ ಒಪ್ಪಂದ ಒಟ್ಟು ಸ್ವರೂಪದಲ್ಲಿ ಮಹಿಳೆಯರ ಹಕ್ಕುಗಳನ್ನು ಕುರಿತ ಒಂದು ಮಸೂದೆಯೇ ಆಗಿದೆ. ಈಗ ಚಾಲ್ತಿಯಲ್ಲಿರುವ ಎಲ್ಲ ಮಾನವ ಹಕ್ಕುಗಳ ಒಪ್ಪಂದವೂ ಮಹಿಳೆಯರ ಬಗೆಗಿನ ಪಕ್ಷಪಾತ ನಿಲುವನ್ನು ತೊಡೆದುಹಾಕಲು ಅಸಮರ್ಪಕವಾಗಿದೆಯೆಂಬ ಅಂಶವೇ ವಿಶ್ವ ಸಂಸ್ಥೆಯನ್ನು ಈ ದಿಕ್ಕಿನಲ್ಲಿ ಮತ್ತೂ ಗಂಭೀರವಾಗಿ ಚಿಂತಿಸುವಂತೆ ಮಾಡಿ ಮಹಿಳೆಯರ ಕುರಿತಾದ ಪಕ್ಷಪಾತ ಮತ್ತು ಅಸಮಾನತೆಯನ್ನು ನಿವಾರಿಸುವ ತಂತ್ರ ಹೂಡಿದೆ. ಅದೇ ಈ ಒಪ್ಪಂದ.

ಎಲ್ಲ ದೇಶದ ಮಹಿಳೆಯರು ತಮ್ಮ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು ಸಂಪೂರ್ಣವಾಗಿ ಅನುಭವಿಸುವಂತೆ ಅವಕಾಶ ಮಾಡಿಕೊಡಲು ಅಲ್ಲಿನ ಸರ್ಕಾರಗಳು ಜರಾಬ್ದಾರಿ ವಹಿಸಬೇಕೆಂದು ಈ ಒಪ್ಪಂದವು ಒತ್ತಾಯಿಸುತ್ತದೆ. ಅಷ್ಟೇ ಅಲ್ಲದೆ ಸ್ತ್ರೀ ಪುರುಷರ ನಡುವೆ ಸಮಾನತೆಯನ್ನು ಸಾಧಿಸುವ ನಿಟ್ಟಿನಲ್ಲಿ ಹಲವಾರು ಕಾರ್ಯಕ್ರಮಗಳನ್ನು ಸೂಚಿಸುತ್ತದೆ. ಸರ್ಕಾರಗಳು ಮಹಿಳೆಯರ ಸಾರ್ವಜನಿಕ ಬದುಕಿನಲ್ಲಿ, ಕಾನೂನಿನ ಚೌಕಟ್ಟಿನಲ್ಲಿ ಮತ್ತು ರಾಜಕೀಯ ಭಾಗವಹಿಸುವಿಕೆಯಲ್ಲಿ ಸಮಾನತೆಯನ್ನು ಸಾಧಿಸುವತ್ತ ಮಾತ್ರ ಗಮನ ಹರಿಸದೆ ಮಹಿಳೆಯರ ಖಾಸಗಿ ಬದುಕಿನಲ್ಲೂ, ಕುಟುಂಬದ ಆಗು ಹೋಗುಗಳಲ್ಲೂ ಸಮಾನತೆಯ ನೆಲೆಗಳು ದೊರಕುವಂತೆ ಕಾರ್ಯ ತಂತ್ರಗಳನ್ನು ರೂಪಿಸಬೇಕೆಂದು ಈ ಒಪ್ಪಂದ ಒತ್ತಾಯಿಸುತ್ತದೆ.

ವಿಶ್ವಸಂಸ್ಥೆಯ ಜನರಲ್ ಅಸೆಂಬ್ಲಿಯಲ್ಲಿ 1979ರ ಡಿಸೆಂಬರ್‌ನಲ್ಲಿ ಈ ಒಪ್ಪಂದವನ್ನು ಮಂಡಿಸಲಾಯಿತು. ಶೀಘ್ರದಲ್ಲೇ ಅದು ಅಂಗೀಕೃತವಾಗಿ 1981ರ ಸೆಪ್ಟೆಂಬರ್ 3ರಂದು ಸ್ವೀಕೃತವಾಯಿತು. ಈಗ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳಲ್ಲಿ ಎರಡನೇ ಮೂರು ಭಾಗಕ್ಕೂ ಹೆಚ್ಚು ದೇಶಗಳು, ಅಂದರೆ ಸುಮಾರು 139 ದೇಶಗಳು ಈ ಒಪ್ಪಂದಕ್ಕೆ ಭಾಗಿಯಾಗಿವೆ. ಇನ್ನೂ ಸುಮಾರು 44 ದೇಶಗಳು ಈ ಒಪ್ಪಂದದ ವಿರುದ್ಧವಾಗಿ ಕಾರ್ಯವಹಿಸುವುದಿಲ್ಲವೆಂಬ ಭರವಸೆ ಕೊಟ್ಟಿವೆ.

### ಸೀಡಾ (CEDAW) ಸಮಿತಿ

ಸೀಡಾ ಒಪ್ಪಂದವು ತನ್ನ ಕಾರ್ಯಕ್ರಮಗಳನ್ನು ಮತ್ತು ಯೋಜನೆಗಳನ್ನು ಕ್ರಿಯಾರೂಪಕ್ಕೆ ತರಲು ಒಂದು ಸಮಿತಿಯನ್ನು ನೇಮಿಸಿದೆ. ಸೀಡಾ ಸಮಿತಿಯಲ್ಲಿ ಇಪ್ಪತ್ತಮೂರು ರಾಷ್ಟ್ರಗಳ ಪ್ರತಿನಿಧಿಗಳು ಇರುತ್ತಾರೆ. ಮಹಿಳಾ ಹಕ್ಕುಗಳ ಕ್ಷೇತ್ರದಲ್ಲಿ ಕೆಲಸ ಮಾಡಿ ನುರಿತ ಪರಿಣತರಾದ ಈ ಪ್ರತಿನಿಧಿಗಳನ್ನು ಗುಪ್ತ ಮತದಾನದ ಮೂಲಕ ಆಯ್ಕೆ ಮಾಡಲಾಗುತ್ತದೆ. ಈ ಒಪ್ಪಂದಕ್ಕೆ ಬದ್ಧರಾದ ರಾಷ್ಟ್ರಗಳ ಸದಸ್ಯರು ನಾಮಕರಣ ಮಾಡಿದ ಹೆಸರುಗಳಲ್ಲಿ ಚುನಾವಣೆ ನಡೆದು ಈ ಪ್ರತಿನಿಧಿಗಳು ಆಯ್ಕೆಯಾಗುತ್ತಾರೆ. ಈ ಚುನಾವಣೆಯಲ್ಲಿ ಭೌಗೋಳಿಕ ವಿಶೇಷತೆ, ವಿವಿಧ ಜನಾಂಗ, ನಾಗರೀಕತೆ ಮತ್ತು ಕಾನೂನಿನ ವ್ಯವಸ್ಥೆಗಳ ವೈವಿಧ್ಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಪ್ರಾತಿನಿಧ್ಯವನ್ನು ಕೊಡಲಾಗುತ್ತದೆ. ಈ ಇಪ್ಪತ್ತಮೂರು ಸದಸ್ಯರು ತಮ್ಮ ವೈಯಕ್ತಿಕ ಸಾಮರ್ಥ್ಯದ ಮೇಲೆಯೇ ಕಾರ್ಯ ನಿರ್ವಹಿಸುತ್ತಾರೆಯೇ ವಿನಃ ತಮ್ಮ ಮೂಲದ ರಾಷ್ಟ್ರಗಳ ಪ್ರತಿನಿಧಿಗಳಾಗಿ ಕಾರ್ಯನಿರ್ವಹಿಸುವುದಿಲ್ಲ.

ವಿಶ್ವ ಸಂಸ್ಥೆಯ ಉಳಿದ ಒಪ್ಪಂದಗಳ ಸಂಸ್ಥೆಗಳಿಗಿಂತ ಸೀಡಾ ಸಮಿತಿ ಭಿನ್ನವಾಗಿ ಕೆಲಸ ಮಾಡುತ್ತದೆ. ಮೊದಲನೆಯದಾಗಿ, ಅದು 1962ರಲ್ಲಿ ತನ್ನ ಮೊದಲ ಅಧಿವೇಶನವನ್ನು ನಡೆಸಿದಂದಿನಿಂದಲೂ ಅದರ ಎಲ್ಲಾ ಸದಸ್ಯರೂ ಮಹಿಳೆಯರೇ ಆಗಿರುತ್ತಾರೆ. ಸಾಮಾನ್ಯವಾಗಿ ವಿಶ್ವಸಂಸ್ಥೆಯ ಉಳಿದ ಸಂಸ್ಥೆಗಳಲ್ಲೆಲ್ಲಾ ಸದಸ್ಯರು ಸಾಮಾನ್ಯವಾಗಿ ವಕೀಲರು ಹಾಗೂ ನ್ಯಾಯಮೂರ್ತಿಗಳೇ ಆಗಿರುತ್ತಾರೆ. ಆದರೆ, ಅದಕ್ಕೆ ಬದಲಾಗಿ ಸೀಡಾ ಸಮಿತಿಯು ತನ್ನ ಸದಸ್ಯರನ್ನು ವೈವಿಧ್ಯಮಯವಾದ ಶಿಸ್ತುಗಳಿಂದ ಆರಿಸುತ್ತದೆ. ಅದು ತನ್ನ ಸಮಿತಿಯಲ್ಲಿ ಅರ್ಥಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಮತ್ತು ದೂತಾವಾಸದವರನ್ನು ಆರಿಸಿಕೊಳ್ಳುತ್ತದೆ. ಈ ಎಲ್ಲ ಅಂಶಗಳೂ ಸಮಿತಿಯ ವೈವಿಧ್ಯಮಯ ಮತ್ತು ಸೃಜನಾತ್ಮಕ ಸ್ವರೂಪದ ಕಾರ್ಯಶೈಲಿಯ ಮೇಲೆ ಪ್ರಭಾವ ಬೀರುತ್ತದೆ.

ಈ ಒಪ್ಪಂದಕ್ಕೆ ಬದ್ಧರಾದ ಎಲ್ಲ ರಾಷ್ಟ್ರಗಳೂ ಸೀಡಾದ ಧ್ಯೇಯೋದ್ದೇಶಗಳನ್ನು ಸಾಧಿಸಲು ನಡೆಸಿರುವ

ಪ್ರಯತ್ನಗಳನ್ನು ಒಪ್ಪಂದಕ್ಕೆ ಸಹಿ ಹಾಕಿದ ಒಂದು ವರ್ಷದೊಳಗೆ ವರದಿಮಾಡಬೇಕು. ನಂತರದ ಪ್ರಗತಿಯನ್ನು ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ವರದಿ ಮಾಡಬೇಕು.

ರಾಷ್ಟ್ರಗಳು ತಮ್ಮ ವರದಿಗಳನ್ನು ತಯಾರಿಸಲು ಅನುಕೂಲವಾಗಲು ಸೀಡಾ ಸಮಿತಿಯು ಕೆಲವೊಂದು ಮಾರ್ಗದರ್ಶಿ ಸೂತ್ರಗಳನ್ನು ರೂಪಿಸಿದೆ. ಇದರಂತೆ ಮೊದಲ ಕಂತಿನಲ್ಲಿ ಆ ರಾಷ್ಟ್ರಗಳ ಮಹಿಳೆಯರ ಸ್ಥಿತಿಗತಿಗಳನ್ನು ಕುರಿತ ಒಂದು ವಿವರವಾದ ಮತ್ತು ವ್ಯಾಪಕವಾದ ವರದಿಯನ್ನು ಸಿದ್ಧಪಡಿಸಿ ಪ್ರಸ್ತುತ ಪಡಿಸುವುದು. ಎರಡನೆಯ ಮತ್ತು ನಂತರದ ವರದಿಗಳು ಹಿಂದಿನ ಮಾಹಿತಿಯನ್ನು ಪರಿಷ್ಕರಿಸುವ ಮತ್ತು ಪ್ರಮುಖ ಬೆಳವಣಿಗೆಗಳನ್ನು ದಾಖಲಿಸುವ, ಒಪ್ಪಂದವನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತರಲು ಇರುವ ಅಡೆತಡೆಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಯಿತು.

ಆರಂಭದಲ್ಲಿ ರಾಷ್ಟ್ರದ ಪ್ರತಿನಿಧಿಗಳ ಸಮ್ಮುಖದಲ್ಲಿಯೇ ಅವರ ವರದಿಗಳನ್ನು ಸೀಡಾ ಸಮಿತಿಯು ಗಮನಿಸಿತು. ಆ ಸಭೆಯಲ್ಲಿನ ಎಲ್ಲ ಸದಸ್ಯರೂ ತಮ್ಮ ಅನುಮಾನಗಳನ್ನು, ವಿಶ್ಲೇಷಣೆಗಳನ್ನು ಕೇಳಿ ತಿಳಿದುಕೊಳ್ಳಲು ಸ್ವತಂತ್ರರು.

1990 ರಿಂದೀಚೆಗೆ ಎರಡನೆಯ ಮತ್ತು ನಂತರದ ವರದಿಗಳನ್ನು ಐವರು ಸಮಿತಿಯ ಸದಸ್ಯರನ್ನೊಳಗೊಂಡ ಕ್ರಿಯಾತಂಡಗಳು ಮೊದಲು ಪರಿಶೀಲಿಸಿ, ನಂತರ ಪೂರ್ಣ ಸಭೆಯಲ್ಲಿ ಪ್ರಶ್ನೆಗಳನ್ನು ಎತ್ತಲು ಅನುವಾಗುವಂತೆ ಸಿದ್ಧತೆ ಮಾಡಿಕೊಡುತ್ತಿವೆ. ಈ ಪ್ರಶ್ನೆಗಳನ್ನು ಸಂಬಂಧಪಟ್ಟ ಸದಸ್ಯ ರಾಷ್ಟ್ರಗಳಿಗೆ ಮುಂಚಿತವಾಗಿಯೇ ಕಳುಹಿಸಿಕೊಡಲಾಗುತ್ತದೆ. ನಂತರ ಪ್ರತಿನಿಧಿಗಳು ಉತ್ತರಗಳೊಂದಿಗೆ ಸಮಿತಿಯನ್ನು ಎದುರಿಸುವರು. ಈ ವರದಿಯ ಕಾರ್ಯಕ್ರಮ ಬಹಿರಂಗವಾಗಿ ನಡೆಯುತ್ತದೆ. ವಿಶ್ವ ಸಂಸ್ಥೆಯ ಪರಿಣಿತ ತಂಡವು ಈ ಸಭೆಯಲ್ಲಿ ಮಾತನಾಡಲು ಅವಕಾಶವಿರುತ್ತದೆ. ಈ ಪರಿಣಿತರ ಪರಿಶೀಲನೆಗಳನ್ನು ಸಭೆಯಲ್ಲಿ ಮಂಡಿಸಲು ಸಮಿತಿಯು ಆಹ್ವಾನಿಸುತ್ತದೆ. ಇದರ ಜೊತೆಗೆ ಸೀಡಾ ಸಮಿತಿಯು ಸರ್ಕಾರೇತರ ಸಂಸ್ಥೆಗಳಿಂದಲೂ ಅನಧಿಕೃತವಾಗಿ ಮಾಹಿತಿಯನ್ನು ಪಡೆದುಕೊಂಡಿರುತ್ತದೆ. ಕೆಲವು ಸರ್ಕಾರೇತರ ಸಂಘಟನೆಗಳು ಸಮಿತಿಯ ಸಭೆಯಲ್ಲಿ ಭಾಗವಹಿಸುತ್ತದೆಯಾದರೂ ಅಧಿಕೃತವಾಗಿ ಇವರುಗಳನ್ನು ಆ ದೇಶದ ಪ್ರತಿನಿಧಿಗಳಾಗಿಯೇ ಸ್ವೀಕರಿಸಲು ಸಾಧ್ಯವಿಲ್ಲ.

## ರಚನಾತ್ಮಕ ಸಂವಾದ

1994ರ ಫೆಬ್ರವರಿ 4 ರಂದು ಸಮಿತಿಯು ಸಭೆ ಸೇರಿದಾಗ 74 ಮೊದಲ ವರದಿಗಳು, 42 ಎರಡನೆಯ ವರದಿಗಳು ಮತ್ತು 12 ಮೂರನೆಯ ವರದಿಗಳನ್ನು ಪಡೆದುಕೊಂಡಿತ್ತು. ಇದರ ಜೊತೆಗೆ, ಬೋಸ್ನಿಯಾ ಮತ್ತು ಹರ್ಜಿಗೋವಿನಾದಿಂದ ಒಂದು ಮತ್ತು ಸರ್ಬಿಯಾ ಹಾಗೂ ಮಾಂಟೆಗ್ರೋನಿಂದ ಮತ್ತೊಂದು ವರದಿಯನ್ನು ಪಡೆದುಕೊಂಡಿತ್ತು.

ಸಮಿತಿಯು ರಾಷ್ಟ್ರೀಯ ವರದಿಗಳನ್ನು ಪರಿಶೀಲಿಸುವಾಗ ಆ ದೇಶಗಳ ನಿಲುವುಗಳಿಗೆ ವಿರುದ್ಧವಾಗೇನೂ ಕೆಲಸ ಮಾಡುವುದಿಲ್ಲ. ಸಮಿತಿಯು ದೇಶಗಳ ನಡುವಿನಲ್ಲಿ ರಚನಾತ್ಮಕವಾದ ಮತ್ತು ಹಾರ್ದಿಕವಾದ ಸಂಬಂಧವನ್ನು ಬೆಳಸಿಕೊಂಡೇ ಅಭಿಪ್ರಾಯ, ಸಲಹೆ ಮತ್ತು ಮಾಹಿತಿಗಳ ವಿನಿಮಯದ ಮೂಲಕ ಆರೋಗ್ಯಕರವಾದ ಪ್ರಯತ್ನಗಳನ್ನು ನಡೆಸಿಕೊಂಡು ಕೆಲಸ ಮಾಡುತ್ತದೆ. ಆದ್ದರಿಂದ ಸಮಿತಿಯ ನಿಯಮಗಳನ್ನು ಯಾವುದೇ ದೇಶವು ಮಾನ್ಯಮಾಡದಿದ್ದಾಗ ಅದನ್ನು ಉಲ್ಲಂಘನೆಯೆಂದು ಭಾವಿಸದೆ, ಕುಂದುಕೊರತೆಯನ್ನು ಎತ್ತಿ ತೋರಿಸುತ್ತಾ ಸರಿಪಡಿಸಲು ಪ್ರಯತ್ನಿಸುತ್ತದೆ. ಮಹಿಳೆಯರ ಸ್ಥಿತಿಗತಿಗಳ ವಿಶ್ಲೇಷಣೆಯಲ್ಲಿ ಗುಣಾತ್ಮಕ ಅಂಶಗಳಷ್ಟೆ ಸಂಖ್ಯಾದೃಷ್ಟಿಯ ಬೆಳವಣಿಗೆಯೂ ಮುಖ್ಯ ಎಂಬುದನ್ನು ನಂಬಿರುವುದರಿಂದ ಅಂಕಿ, ಸಂಖ್ಯೆಗಳ ಮಾಹಿತಿಗೆ ಹೆಚ್ಚಿನ ಬೆಲೆ ಕೊಡುತ್ತದೆ. ಈ ವರದಿಗಳ ಪರಿಶೀಲನೆಯಲ್ಲಿ ವಿಶ್ವದ ಮಹಿಳೆಯರನ್ನು ಕುರಿತ ಹಲವಾರು ಮಾಹಿತಿಗಳು ಹೊರಬೀಳುತ್ತವೆ. ಅದು ಮಹಿಳೆಯರ ಆರ್ಥಿಕ ಸ್ಥಿತಿಗತಿಗಳಿರಬಹುದು, ರಚನಾತ್ಮಕ ಹೊಂದಾಣಿಕೆಯ ನೀತಿಯಿಂದ ಹೆಣ್ಣಿನ ಮೇಲಾಗಿರುವ ಪರಿಣಾಮಗಳಿರಬಹುದು, ಹೆರಿಗೆ ರಜೆ, ಮಹಿಳೆಯರ ಮೇಲಿನ ದೌರ್ಜನ್ಯ, ಸೀಡಾ ಒಪ್ಪಂದ ಮತ್ತು ಅದರ ಬಗೆಗಿನ ತಿಳುವಳಿಕೆ ಮೂಡಿಸುವುದು, ರಾಷ್ಟ್ರೀಯ ವರದಿಗಳ ತಯಾರಿಯಲ್ಲಿ ಸರ್ಕಾರೇತರ ಸಂಘಟನೆಗಳ ಭಾಗವಹಿಸುವಿಕೆ ಎಷ್ಟಿದೆಯೆಂಬ ಸಂಗತಿಗಳು ಈ ವರದಿಯ ಪರಿಶೀಲನೆಯ ಸಂದರ್ಭದಲ್ಲಿ ಹೊರಬೀಳುತ್ತವೆ. ಕಳೆದ ಮೂರ್ನಾಲ್ಕು ವರ್ಷಗಳಿಂದ ಮಹಿಳೆಯರ ಹಕ್ಕುಗಳು ಯುದ್ಧ ಮತ್ತು ಶಸ್ತ್ರಾಸ್ತ್ರಗಳ ಸಂಘರ್ಷದ ಸಂದರ್ಭದಲ್ಲಿ ರಕ್ಷಿತವಾಗಬೇಕಾದ ಸ್ಥಿತಿಯ ಬಗ್ಗೆ ಸೀಡಾ ಸಮಿತಿಯು ತನ್ನ ಆತಂಕ ವ್ಯಕ್ತಪಡಿಸಿದೆ.

### ಸಾಮಾನ್ಯ ಶಿಫಾರಸ್ಸುಗಳು

ಸಮಿತಿಯು ತನ್ನ ಅಧಿವೇಶನಗಳನ್ನು ನಡೆಸುವಾಗ ಎರಡು ಸ್ಥಾಯಿಕ್ರಿಯಾ ತಂಡಗಳು ಸಭೆ ಸೇರುತ್ತವೆ. ಒಂದು ತಂಡವು, ಸಮಿತಿಯ ಕಲಾಪಗಳನ್ನು ತ್ವರಿತವಾಗಿ ನಡೆಸಿಕೊಂಡು ಹೋಗಲು ನೆರವಾಗುತ್ತವೆ. ಮತ್ತೊಂದು ತಂಡವು, ಒಪ್ಪಂದದ 21ನೇ ಪರಿಚ್ಛೇದವನ್ನು ಜಾರಿಗೊಳಿಸುವ ಮಾರ್ಗವನ್ನು ಕುರಿತು ಕ್ರಿಯಾಶೀಲವಾಗುತ್ತದೆ. ಸಮಿತಿಯ ಶಿಫಾರಸ್ಸುಗಳನ್ನು ಕಾರ್ಯರೂಪಕ್ಕೆ ತರಲು ಸಮಿತಿಯು ಕೆಲವೊಂದು ಸಲಹೆಗಳನ್ನು ನೀಡಲು ಅಧಿಕಾರ ಹೊಂದಿರುತ್ತದೆ. ಈ ಸಲಹೆ ಸೂಚನೆಗಳೂ ಕೂಡ ಆ ದೇಶಗಳು ಮಂಡಿಸಿದ ವರದಿಯ ಆಧಾರದ ಮೇಲೆಯೇ ರೂಪಿತವಾಗಿರಬೇಕು.

### ಒಪ್ಪಂದದ ಕ್ರಿಯಾಶೀಲತೆ

ಸೀಡಾ ಒಪ್ಪಂದವನ್ನು ಅಂಗೀಕರಿಸಿದ ಮೇಲೆ ಹಲವಾರು ರಾಷ್ಟ್ರಗಳ ಜೀವನದಲ್ಲಿ ಮಹತ್ತರ ಮಾರ್ಪಾಡುಗಳಾಗಿವೆ. ಉದಾಹರಣೆಗೆ, ಬ್ರೆಜಿಲ್ ಸೀಡಾ ಸಮಿತಿಯು ಧ್ಯೇಯೋದ್ದೇಶಗಳಿಗೆ ಅನುವಾಗುವಂತೆ ತನ್ನ ಸಂವಿಧಾನವನ್ನು ಮಾರ್ಪಡಿಸಿಕೊಂಡು ಹೊಸದಾಗಿ ರಚಿಸಿಕೊಂಡಿದೆ. ಆಸ್ಟ್ರೇಲಿಯಾದಲ್ಲಿ ಲಿಂಗಬೇಧವನ್ನು ನಿಷೇಧಿಸುವ ಕಾನೂನುಗಳು ರಚಿತವಾಗಿದೆ. ಉಳಿದ ದೇಶಗಳಲ್ಲಿ ರಾಷ್ಟ್ರೀಯ ಯೋಜನಾ ನೀತಿ ಮತ್ತು ಕಾರ್ಯಕ್ರಮಗಳಲ್ಲಿ ಸೀಡಾ ಸಮಿತಿಯ ಸಲಹೆಗಳನ್ನು ಅಂಗೀಕರಿಸಲಾಗಿದೆ. ಸ್ವೀಡನ್ ದೇಶದಲ್ಲಿ ಸಮಾನ ಅವಕಾಶಗಳ ಕಾವಲು ಸಮಿತಿಯನ್ನು ಸ್ಥಾಪಿಸಲಾಗಿದೆ.

ಹಲವಾರು ದೇಶಗಳಲ್ಲಿ ಈ ಒಪ್ಪಂದವು ವ್ಯಾಜ್ಯಗಳನ್ನು ಪರಿಹರಿಸುವಲ್ಲಿ ಪ್ರಭಾವ ಬೀರಿದೆ. ಟಾಂಜಾನಿಯಾದಲ್ಲಿ ಭೂಮಿಗೆ ಸಂಬಂಧಪಟ್ಟಂತೆ ಚಾಲ್ತಿಯಲ್ಲಿರುವ ಪಕ್ಷಪಾತ ತೋರುವ ಸಾಂಪ್ರದಾಯಿಕ ಕಟ್ಟಲೆಗಳು ನೀಡಿದ ತೀರ್ಪನ್ನು ಬದಲಾಯಿಸುವಲ್ಲಿ ಸೀಡಾ ಸೂಚನೆಗಳು ಯಶಸ್ವಿಯಾಗಿವೆ. ಹಾಗೆಯೇ ಬೋಸವಾನಾ ಮತ್ತು ಜಿಂಬಾಬ್ವೆಯಲ್ಲಿ ನಾಗರೀಕ ಹಕ್ಕುಗಳಲ್ಲಿ ಲಿಂಗಬೇಧವನ್ನು ನಿವಾರಿಸಲು ಸೀಡಾ ಸಮಿತಿಯ ಸಲಹೆಗಳನ್ನು ಅಲ್ಲಿನ ನ್ಯಾಯಾಧೀಶರು ಬಳಸಿಕೊಂಡಿದ್ದಾರೆ.

ಇನ್ನೂ ಹಲವು ರಾಷ್ಟ್ರಗಳಲ್ಲಿ ಸೀಡಾ ಒಪ್ಪಂದದನ್ವಯ ವರದಿಗಳ ತಯಾರಿಕೆ ಮತ್ತು ಅದನ್ನು ಜಾರಿ ಮಾಡುವ ಪ್ರಕ್ರಿಯೆಯು ರಾಜಕೀಯ ಚಟುವಟಿಕೆಗೆ ಮತ್ತು ನೀತಿ ಸಂಹಿತೆಯ ರಚನೆಗೆ ಒಂದು ಕ್ರಿಯಾತ್ಮಕ ಚಾಲನೆಯನ್ನು ಕೊಟ್ಟಿದೆ. ಉದಾಹರಣೆಗೆ ಸ್ವೀಡನ್‌ನಲ್ಲಿ ಮೂರನೆಯ ವರದಿಯ ಸಂಕಲನ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದ 29 ಪರಿಣಿತರಲ್ಲಿ ಸರ್ಕಾರೇತರ ಸಂಘಟನೆಗಳು, ರಾಜಕೀಯ ಪಕ್ಷಗಳು ಮತ್ತು ಸರ್ಕಾರದ ಪ್ರತಿನಿಧಿಗಳೂ ಒಟ್ಟಾಗಿ ಸೇರಿದ್ದರು ಎಂಬ ಅಂಶವೇ ಈ ಸಮಿತಿಯ ಗಂಭೀರತೆಯನ್ನು ಸೂಚಿಸುತ್ತದೆ.

ಮಹಿಳಾ ಸಮಾನತೆಯ ಹೋರಾಟದಲ್ಲಿ ಸೀಡಾ ಸಮಿತಿಯ ಪಾತ್ರದ ಮಹತ್ವವನ್ನು ಮನಗಂಡ ಸರ್ಕಾರೇತರ ಸಂಘ, ಸಂಸ್ಥೆಗಳ ಕ್ರಿಯಾಶೀಲ ತೊಡಗುವಿಕೆ ಮತ್ತು ಸ್ಥಳೀಯ, ಪ್ರಾಂತೀಯ ಮತ್ತು ರಾಷ್ಟ್ರೀಯ ನೆಲೆಯಲ್ಲಿ ಮಹಿಳೆಯರ ಹಕ್ಕುಗಳ ಸಮರ್ಥನೆಗಾಗಿ ಇವರುಗಳು ನಡೆಸಿರುವ ಹೋರಾಟವು ಮಹಿಳಾ ಹಕ್ಕುಗಳೆಂದರೆ ಮಾನವ ಹಕ್ಕುಗಳೆಂಬ ಸಂಗತಿಯನ್ನು ಸ್ಪಷ್ಟಪಡಿಸಿವೆ.

## ಕರ್ನಾಟಕ ಹೈಕೋರ್ಟಿನ ಪ್ರಥಮ ಮಹಿಳಾ ನ್ಯಾಯಮೂರ್ತಿ

ಹೊಸ ಸಂವತ್ಸರದಲ್ಲಿ ಕರ್ನಾಟಕದಲ್ಲಿ ಇಬ್ಬರು ಅಪೂರ್ವ ಮಹಿಳೆಯರು ಸಾರ್ವಜನಿಕ ಜೀವನದಲ್ಲಿ ಕಾಣಿಸಿಕೊಂಡರು. ಒಬ್ಬರು, ಮೊದಲ ಬಾರಿಗೆ ಕರ್ನಾಟಕದಲ್ಲಿ ಮಹಿಳಾ ರಾಜ್ಯಪಾಲರಾಗಿ ಶ್ರೀಮತಿ ರಮಾದೇವಿ ನೇಮಕಗೊಂಡರೆ, ಮತ್ತೊಬ್ಬರು ಮೊದಲ ಹೈಕೋರ್ಟ್ ನ್ಯಾಯಾಧೀಶೆಯಾಗಿ ಶ್ರೀಮತಿ ಮಂಜುಳಾ ಚೆಲ್ಲೂರು ನೇಮಕಗೊಂಡರು.

130 ವರ್ಷಗಳ ಇತಿಹಾಸವಿರುವ ಬೆಂಗಳೂರಿನ ಹೈಕೋರ್ಟಿಗೆ ಮೊದಲ ಮಹಿಳಾ ನ್ಯಾಯಾಧೀಶೆ ನೇಮಕಗೊಳ್ಳಲು ಇಷ್ಟು ದಿನ ಕಾಯಬೇಕಾಯ್ತು. ಹಲವಾರು ಪ್ರಥಮಗಳನ್ನು ತಮ್ಮ ಬಗಲಿಗೆ ಹಾಕಿಕೊಂಡ ಮಂಜುಳಾ ಬಳ್ಳಾರಿಯ ನ್ಯಾಯಾಲಯದ ಮೊದಲ ಮಹಿಳಾ ನ್ಯಾಯಾಧೀಶೆ. ಕರ್ನಾಟಕದ ನ್ಯಾಯಾಂಗ ಇತಿಹಾಸದಲ್ಲಿ ಪ್ರಪ್ರಥಮ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶೆ. ಅರ್ಹತೆ ಮತ್ತು ದಕ್ಷತೆಗಳ ಸಂಗಮವಾಗಿರುವ ನ್ಯಾಯಮೂರ್ತಿ ಮಂಜುಳಾ ಬೆಂಗಳೂರು, ಕೋಲಾರ ಹಾಗೂ ಮೈಸೂರಿನಲ್ಲಿ ತಮ್ಮ ಹುದ್ದೆಗಳಲ್ಲದೆ ಬೆಂಗಳೂರಿನಲ್ಲಿ ಸಣ್ಣ ಪ್ರಕರಣಗಳ ನ್ಯಾಯಾಲಯದ ಮುಖ್ಯ ನ್ಯಾಯಾಧೀಶೆಯಾಗಿ ಹಾಗೂ ಕುಟುಂಬ ನ್ಯಾಯಾಲಯದ ನ್ಯಾಯಾಧೀಶೆಯಾಗಿ ಹೆಸರು ಮಾಡಿದಂಥವರು. ಬ್ರಿಟಿಷ್ ಕೌನ್ಸಿಲ್ ವಾರ್ವಿಕ್ ವಿಶ್ವವಿದ್ಯಾಲಯದಲ್ಲಿ ''ಜೆಂಡರ್ ಅಂಡ್ ಜಸ್ಟೀಸ್'' ವಿಷಯದಲ್ಲಿ ತರಬೇತಿ ಪಡೆದವರಾಗಿದ್ದಾರೆ.

# ಫ್ರ್ಯಾಯಡ್‌ನ ಸಿದ್ಧಾಂತಗಳಿಗೆ ಸವಾಲೆಸೆದ ವಿಜ್ಞಾನಿ ಕಾರೆನ್ ಹಾರ್ನಿ (1885-1952)

ಚಂದ್ರ

'ದೇಹ ರಚನೆಯೇ ಭವಿಷ್ಯವನ್ನು ನಿರ್ಧರಿಸುತ್ತದೆ - ನಿಮ್ಮ ದೇಹವೇ ನಿಮ್ಮ ವಿಧಿ' ಎಂದು ಫ್ರ್ಯಾಯಡ್ ಸಾರಿದ್ದ. ಫ್ರ್ಯಾಯಡ್ 'ಸ್ತ್ರೀ ಮನಃ ಶಾಸ್ತ್ರ'ವನ್ನು (feminine psychology) 'ಪುರುಷ ಮನಃ ಶಾಸ್ತ್ರ'ವನ್ನು ಕುರಿತಾದ ಸಿದ್ಧಾಂತಗಳನ್ನು ತಿರಸ್ಕರಿಸಿದ ಮೊಟ್ಟಮೊದಲ ವಿಜ್ಞಾನಿ ಕಾರೆನ್ ಹಾರ್ನಿ. ಫ್ರ್ಯಾಯಡ್ ಈ ಸಿದ್ಧಾಂತಗಳನ್ನು 'ಪುರುಷ ಮನಃ ಶಾಸ್ತ್ರ'ದ ನ್ಯೂನತೆ ಎಂದು ಕಾರೆನ್ ಸಾಧಿಸಿದಳು. ಫ್ರ್ಯಾಯಡ್‌ನ ತತ್ತ್ವಗಳನ್ನು ಪ್ರಶ್ನಿಸಿದ ಈಕೆಗೆ ಪುರುಷ ಪ್ರಧಾನ ಸಮಾಜ ಮತ್ತು ಸಂಸ್ಕೃತಿಯೇ ಮಹಿಳೆಯರ ಮಾನಸಿಕ ರೋಗಗಳಿಗೆ ಕಾರಣವಿರಬೇಕೆನಿಸಿತು. ಇಂಥಾ ಅಭಿಪ್ರಾಯಗಳಿಂದಾಗಿ ಕಾರೆನ್‌ಳನ್ನು 'ನ್ಯೂಯಾರ್ಕ್ ಮನೋವಿಶ್ಲೇಶಣಾ ಸಂಸ್ಥೆ'ಯಿಂದ ಹೊರ ಹಾಕಿದರು. ಜೀವನೋಪಾಯವನ್ನು ಕಳೆದುಕೊಳ್ಳಬೇಕಾಗಿ ಬಂದರೂ ಕಾರೆನ್ ಹಿಂಜರಿಯಲಿಲ್ಲ. ಆಕೆಯ ಕೆಲಸಕ್ಕೆ ಎಲ್ಲಿಲ್ಲದ ಸ್ಪರ್ಧೆ ಇತ್ತು. ನಾಜಿಗಳಿಂದ ತಪ್ಪಿಸಿಕೊಳ್ಳಲು ಯೂರೋಪಿನಿಂದ ವಲಸೆ ಬಂದ ವಿಜ್ಞಾನಿಗಳು ಬಹುಸಂಖ್ಯೆಯಲ್ಲಿದ್ದರು. ಧೃತಿಗೆಡದೆ ತನ್ನದೇ ಆದ ಮನೋವಿಶ್ಲೇಷಣಾ ಸಂಸ್ಥೆಯನ್ನು ಸ್ಥಾಪಿಸಿ ಯಶಸ್ವಿಯಾದ ಕಾರೆನ್ ಹಾರ್ನಿ, ಮನೋವಿಶ್ಲೇಷಣಾ ತಜ್ಞಳಾಗಿ ಅಮೆರಿಕಾದ ಮಾನಸಿಕ ರೋಗಚಿಕಿತ್ಸೆಯನ್ನು (psychotherapy) ಪ್ರಭಾವಿಸಿದ ಪ್ರಮುಖ ವಿಜ್ಞಾನಿ. ಈಕೆ ಫ್ರ್ಯಾಯಡ್‌ನ ಮನೋವಿಶ್ಲೇಷಣಾ ಸಿದ್ಧಾಂತಗಳನ್ನು ಪರಿಷ್ಕರಿಸಿದಳು. 'ಮನುಷ್ಯನಲ್ಲಿ ಬದಲಾಗುವ ಮತ್ತು ಬೆಳೆಯುವ ಶಕ್ತಿ ಇದೆ' ಎಂದು ಬಲವಾಗಿ ಪ್ರತಿಪಾದಿಸಿದ ಮನಶಾಸ್ತ್ರಜ್ಞೆ ಈಕೆ.

ಕಾರೆನ್ ಹಾರ್ನಿ 1885ರಲ್ಲಿ ಜರ್ಮನಿಯ ಹ್ಯಾಮ್‌ಬರ್ಗನಲ್ಲಿ ಹುಟ್ಟಿದಳು. ತೀರಾ ಟೀಕಾ ಸ್ವಭಾವದ ತಂದೆ, ಮಹಿಳೆಯರ ವಿದ್ಯಭ್ಯಾಸವನ್ನು ಕಟುವಾಗಿ ವಿರೋಧಿಸುತ್ತಿದ್ದ. ಕಾರೆನ್ ಶಾಲೆಗೆ ಹೋಗುವುದನ್ನೇ ತಡೆಯಲು ಯತ್ನಿಸಿದ್ದಲ್ಲದೆ ಮುಂದೆ ಆಕೆ ವೈದ್ಯಕೀಯವನ್ನು ಓದದಂತೆ ತಡೆಯಲೂ ಪ್ರಯತ್ನಿಸಿದ. ಓದಿನಲ್ಲಿ ಮುಂದಿದ್ದ ಕಾರೆನ್ ಹನ್ನೆರಡನೇ ವಯಸ್ಸಿನಲ್ಲಿ ತಾನು ವೈದ್ಯಕೀಯವನ್ನು ಅಧ್ಯಯನ ಮಾಡಬೇಕೆಂಕು ನಿರ್ಧರಿಸಿದಳು. ತಾಯಿಯ ಸಹಕಾರದಿಂದ ಕಾರೆನ್‌ಳ ಕನಸು ನನಸಾಯಿತು. ಪತಿಯನ್ನು ಬಿಟ್ಟು, ತಾಯಿ ಮಗಳೊಡನೆ ಜರ್ಮನಿಯ ಫ್ರೀಬರ್ಗ್ ವಿಶ್ವವಿದ್ಯಾಲಯಕ್ಕೆ ಬಂದಳು. ಮೊದಲು ಫ್ರೀಬರ್ಗ್ ವಿಶ್ವವಿದ್ಯಾಲಯದಲ್ಲಿ, ನಂತರ ಗಾಟಿಂಜೆನ್‌ನಲ್ಲಿ ಕಾರೆನ್ ವೈದ್ಯಕೀಯದ ಅಧ್ಯಯನವನ್ನು ಮಾಡಿದಳು. ಇಲ್ಲಿ ಕಾರೆನ್ ವಕೀಲ ವೃತ್ತಿಗೆ ಓದುತ್ತಿದ್ದ ಆಸ್ಕರ್ ಹಾರ್ನಿಯನ್ನು ಭೇಟಿಯಾಗಿ, 1909ರಲ್ಲಿ ಆತನನ್ನು ವಿವಾಹವಾದಳು. 1911ರಲ್ಲಿ ಬರ್ಲಿನ್ ವಿಶ್ವವಿದ್ಯಾಲಯದಿಂದ ಪದವಿ ಪಡೆದ ಕಾರೆನ್, 1915ರಲ್ಲಿ ಮನೋವಿಕಾರವನ್ನು ಕುರಿತಂತೆ 'ಟ್ರಿಮಾಟಿಕ್ ಸೈಕೊಸೀಸ್' ಎಂಬ ಥೀಸೀಸ್ ಬರೆದು, ಎಂ.ಡಿ. ಪದವಿಯನ್ನು ಪಡೆದಳು. ಈ ನಡುವೆ ಕಾರೆನ್ ಮೂರು ಹೆಣ್ಣು ಮಕ್ಕಳ ತಾಯಿಯಾಗಿದ್ದಳು.

ಮೊದಲ ಮಹಾಯುದ್ಧದ ಸಮಯದಲ್ಲಿ ಕಾರೆನ್, ಬರ್ಲಿನ್ ಸ್ಯಾನಿಟೋರಿಯಮ್ ಮತ್ತು ಮಿಲಿಟರಿ ಆಸ್ಪತ್ರೆಗಳಲ್ಲಿ ದುಡಿದಳು. ಮಹಾಯುದ್ಧ ಮುಗಿದ ಮೇಲೆ ಬರ್ಲಿನ್‌ನ ಒಂದು 'ನರಗಳ ಚಿಕಿತ್ಸಾಲಯ'ದಲ್ಲಿ ಕೆಲಸ ಮಾಡತೊಡಗಿದಳು. ಇಲ್ಲಿ ಫ್ರ್ಯಾಯಡ್‌ನ ನಿಕಟವರ್ತಿ ಕಾರ್ಲ್ ಅಬ್ರಾಹಮ್ ಅವರ ಗುಂಪನ್ನು ಸೇರಿದಳು. ಇದೇ ಗುಂಪು ಮುಂದೆ 'ಬರ್ಲಿನ್ ಮನೋವಿಶ್ಲೇಷಣಾ ಸಂಸ್ಥೆ'ಯಾಗಿ ರೂಪುಗೊಂಡಾಗ, ಇಲ್ಲಿ ಪ್ರಾಧ್ಯಾಪಕಿಯಾಗಿ ಕಾರೆನ್ ದುಡಿದಳು. ಸ್ವತಂತ್ರವಾಗಿ ಒಂದು ಚಿಕಿತ್ಸಾಲಯವನ್ನೂ ತೆರೆದಳು. 1932ರಲ್ಲಿ ಕಾರೆನ್‌ಗೆ ಶಿಕಾಗೋನಿಂದ ಆಹ್ವಾನ ಬಂದಿತು. 1926ರಲ್ಲಿಯೇ ಕಾರೆನ್ ಪತಿಯಿಂದ ಬೇರ್ಪಟ್ಟಿದ್ದಳು. ಒಂದು ವರ್ಷ ಶಿಕಾಗೋ ಮನೋವಿಶ್ಲೇಷಣಾ ಸಂಸ್ಥೆಯಲ್ಲಿ ಮನೋವಿಶ್ಲೇಷಣೆಯನ್ನು ಕುರಿತು ಕಾರೆನ್ ತರಪೇತು ನೀಡಿದಳು. ನ್ಯೂಯಾರ್ಕಿನ 'ಸಾಮಾಜಿಕ ಸಂಶೋಧನಾ ಸಂಸ್ಥೆ'ಯಲ್ಲಿ ಉಪನ್ಯಾಸಗಳನ್ನು ನೀಡಿದಳು. ಇದೇ ಸಂಸ್ಥೆಯಲ್ಲಿ ಹೆಚ್ಚಿನ ಅಧ್ಯಯನವನ್ನು ನಡೆಸಿದ ಹಾರ್ನಿಯ ಬರವಣಿಗೆಯ ಕೆಲಸವೂ ಇಲ್ಲಿ ಮುಂದುವರೆಯಿತು. ಕಾರೆನ್ 'ಅಮೆರಿಕದ ಮನೋವಿಶ್ಲೇಷಣಾ ಸಂಸ್ಥೆ'ಯ ಮುಖ್ಯಾಧಿಕಾರಿಯಾದಳು. ಇಲ್ಲಿ ಕಾರೆನ್‌ಯೂರೋಪಿನಲ್ಲಿ ಅನ್ವಯವಾಗುತ್ತಿದ್ದ ಫ್ರ್ಯಾಯಡ್‌ನ ಸಿದ್ಧಾಂತಗಳು ಅಮೆರಿಕದಲ್ಲಿ ಸಂಗತವಿಲ್ಲ, ಅನ್ವಯವಾಗುವುದಿಲ್ಲ ಎಂಬುದನ್ನು ಗಮನಿಸಿದಳು. ಅಮೆರಿಕಾದ ಮಾನಸಿಕ ಬೇನೆ (neurosis) ಬೇರೆ ಬಗೆಯದಾಗಿತ್ತು ಯೂರೋಪ್ ಮತ್ತು ಅಮೆರಿಕಾದ ನಾಗರಿಕತೆಗಳ ನಡುವಿನ ಸಾಂಸ್ಕೃತಿಕ ವ್ಯತ್ಯಾಸಗಳು ಮಾತ್ರ ಈ ಮನೋಬೇನೆಯ ವ್ಯತ್ಯಾಸಗಳನ್ನು ವಿವರಿಸಬಲ್ಲವಿದ್ದವು. ಅಂದರೆ 'ದೇಹವೇ ವಿಧಿಯಾಗಬೇಕಿಲ್ಲ, ದೇಹ ರಚನೆಯೇ ಭವಿಷ್ಯದ ಸಂಪೂರ್ಣ ಕೀಲಿ'ಯಲ್ಲ ಎಂದು ಕಾರೆನ್‌ಗೆ ಅರಿವಾಯಿತು.

ಫ್ರ್ಯಾಯಡ್‌ನ ವಿಚಾರಗಳನ್ನು ಓದಿದ ಕಾರೆನ್‌ಗೆ ಮನೋವಿಶ್ಲೇಷಣೆ ಆಸಕ್ತಿ ಹುಟ್ಟಿಸಿತು. ಫ್ರ್ಯಾಯಡ್‌ನ ಮನೋವಿಶ್ಲೇಷಣಾ ಕ್ರಮವನ್ನು ಆಕೆ ಮೆಚ್ಚಿದ್ದಳು. ಆದರೆ ಫ್ರ್ಯಾಯಡ್‌ನ ಕೆಲವು ವಿಚಾರಗಳು ಕಾರೆನ್‌ಗೆ ಸರಿ ಕಂಡು

ಬಂದಿರಲಿಲ್ಲ. 1922ರಲ್ಲಿಯೇ ಫ್ರಾಯಡ್‌ನ ಪ್ರಸಿದ್ಧ 'ಪೆನಿಸ್ ಎನ್ವಿ' ಸಿದ್ಧಾಂತವನ್ನು ಕಟುವಾಗಿ ಟೀಕಿಸಿದ ಕಾರೆನ್, 'ಸ್ತ್ರೀ ಮನಃಶಾಸ್ತ್ರ' ಗಂಡಸರ ಆಸೆಗಳನ್ನು ಬಿಂಬಿಸುತ್ತದೆ. 'ಮಹಿಳೆಯರು ಹೇಗಿರಬೇಕೆಂದು ಪುರುಷರು ಬಯಸುತ್ತಾರೋ, ಹೇಗಿರಬೇಕೆಂದು ಹಕ್ಕಿನಿಂದ ಕೇಳುತ್ತಾರೋ, ಹಾಗಿರುವಂತೆ ತಮ್ಮನ್ನು ತಾವು ನೋಡಲು ಮಹಿಳೆಯರು ಪ್ರಯತ್ನಿಸುತ್ತಾರೆ. ಪುರುಷರು ಮಹಿಳೆಯರನ್ನು ಹಳಿಯುವಲ್ಲಿ ಹೆಚ್ಚು ಕಾತುರವಾಗಿರುವಂತೆ ಕಾಣುತ್ತದೆ' ಎಂದು ಕಾರೆನ್ ಹೇಳಿದಳು. 'ಪುರುಷರ ಶಿಶ್ನವನ್ನು ಮಹಿಳೆಯರು ಅಸೂಯೆಯಿಂದ ನೋಡುತ್ತಾರೆ' ಎಂಬ ವಿಚಾರವನ್ನು ತಿರಸ್ಕರಿಸಿದ ಕಾರೆನ್ 'ವೂಂಬ್ ಎನ್ವಿ' ಸಿದ್ಧಾಂತವನ್ನು ಮುಂದಿಟ್ಟಳು. ಈಕೆ 'ಮಹಿಳೆಯರು ನಿಜಕ್ಕೂ ಪುರುಷನ ಶಿಶ್ನವನ್ನು ಅಸೂಯೆಯಿಂದ ನೋಡುವುದಿಲ್ಲ, ಈ ಸಮಾಜದಲ್ಲಿ ಪುರುಷನಿಗಿರುವ ಮೇಲು ದರ್ಜೆಯ ಸ್ಥಾನವನ್ನು ಅಸೂಯೆಯಿಂದ ನೋಡುತ್ತಾರೆ' ಎಂದಳು. 'ತಮ್ಮ ಇಷ್ಟ ಬಂದ ಆಸಕ್ತಿಯ ವಿಷಯವನ್ನು ಆಯ್ದುಕೊಂಡು ಯಾರ ತಡೆಯಿಲ್ಲದೆ ಮುಕ್ತವಾಗಿ ಮಾಡಬಲ್ಲ ಪುರುಷನ ಸ್ವಾತಂತ್ರ್ಯವನ್ನು, ಮಹಿಳೆಯರು ಈರ್ಷೆಯಿಂದ ನೋಡುತ್ತಾರೆ' ಎಂದು ವಿವರಿಸಿದಳು. ಆಕೆಯ ವಿಚಾರಗಳು ಹಿಟ್ಲರ್‌ನ ಜರ್ಮನಿಯಲ್ಲಿ ಜನಪ್ರಿಯವಿರಲಿಲ್ಲ. ಜರ್ಮನಿ ಇರಲಿ, ಇಲ್ಲಿ ಅಮೆರಿಕಾದಲ್ಲಿ ಕೂಡಾ ಆಕೆಯ ವಿಚಾರಗಳನ್ನು ಒಪ್ಪಲು ಯಾರೂ ಸಿದ್ಧವಿರಲಿಲ್ಲ.

1930ರ ದಶಕದಲ್ಲಿ ಪ್ರಪಂಚದಾದ್ಯಂತ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು ತೀವ್ರಗತಿಯಿಂದ ರೂಪುಗೊಳ್ಳುತ್ತಿದ್ದವು. ತನ್ನ ತಾಯ್ನಾಡು ಜರ್ಮನಿ ಮತ್ತು ತಾನು ಈಗ ನೆಲೆಸಿದ ಅಮೆರಿಕದ ಮನೋರೋಗಿಗಳಲ್ಲಿನ ವ್ಯತ್ಯಾಸಗಳು, ಈ ವ್ಯತ್ಯಾಸಗಳಿಗೆ ಕಾರಣವೆನಿಸಿದ ಸಂಸ್ಕೃತಿಯ ಪ್ರಭಾವ, ಇವೆಲ್ಲವೂ ಕಾರೆನ್‌ಳನ್ನು ಹೊಸ ವಿಚಾರಗಳತ್ತ ಚಿಂತಿಸುವಂತೆ ಮಾಡಿದ್ದವು. ಹಾಗೆಂದೇ ಅಲ್ಲಿಯವರೆಗೂ ಫ್ರಾಯಡ್‌ವಾದಿಯಾದ ಕಾರೆನ್ ಇದೀಗ ತನ್ನದೇ ಆದ ಹೊಸ ತತ್ವಗಳನ್ನು ನಿರೂಪಿಸಿ ನವ್ಯ ಫ್ರಾಯಡ್‌ವಾದಿಯಾಗಿದ್ದಳು. 1937ರಲ್ಲಿ ಕಾರೆನ್ 'ನ್ಯೂರಾಟಿಕ್ ಪರ್ಸನಾಲಿಟಿ ಆಫ್ ಅವರ್ ಟೈಮ್ಸ್' ಎಂಬ ಪುಸ್ತಕದಲ್ಲಿ ತನ್ನ ವಾದವನ್ನು ಮಂಡಿಸಿದಳು. ಫ್ರಾಯಡ್‌ನ ತತ್ವಗಳನ್ನು ಒಪ್ಪದೆ ಇರಲು ಸ್ಪಷ್ಟ ಕಾರಣಗಳನ್ನು ನೀಡಿದಳು. ಫ್ರಾಯಡ್ ಮನೋರೋಗಗಳಿಗೆ ಕೊಟ್ಟ ನಿರ್ದಿಷ್ಟ ಕಾರಣಗಳಲ್ಲಿ, ಲೈಂಗಿಕತೆ ಮತ್ತು ಬಾಲ್ಯಾವಸ್ಥೆಯಲ್ಲಿನ ಅನುಭವಗಳು ಹೆಚ್ಚು ಪ್ರಾಮುಖ್ಯ ಪಡೆದಿದ್ದವು. 'ವ್ಯಕ್ತಿಯು ತನ್ನ ಜೀವನದಲ್ಲಿ ಎದುರಿಸುವ ಸಮಸ್ಯೆಗಳು, ಅವನು ಬಾಲ್ಯದಲ್ಲಿ ಎದುರಿಸಿದ ಸಮಸ್ಯೆಗಳ ಮರುಕಳಿಕೆ' ಎಂದು ಫ್ರಾಯಡ್‌ನ ಅಭಿಪ್ರಾಯವಾಗಿತ್ತು. ಕಾರೆನ್ ಫ್ರಾಯಡ್‌ನ ವಾದಗಳನ್ನು ನಿರಾಕರಿಸಿ, ಬಾಲ್ಯದ ಅನುಭವಗಳು ವ್ಯಕ್ತಿ ತನ್ನ ಮುಂದಿನ ಬದುಕನ್ನು ಹೇಗೆ ಎದುರಿಸಬಲ್ಲ ಎಂಬುದನ್ನು ನಿರ್ಧರಿಸುತ್ತವೆಯೇ ಹೊರತು, ಆ ಅನುಭವಗಳೇ ಮುಂದಿನ ಸಮಸ್ಯೆಗಳಾಗುವುದಿಲ್ಲ ಎಂದಳು. ಮನೋರೋಗಿಯ ಅತೀತಕ್ಕಿಂದ, ಭೂತದ ಬದುಕಿಗಿಂದ, ಇಂದಿನ ಅನುಭವ ಮತ್ತು ಇಂದಿನ ವಾಸ್ತವ ಹೆಚ್ಚು ಮುಖ್ಯದ್ದು ಎಂದು ಕಾರೆನ್ ಪ್ರತಿಪಾದಿಸಿದಳು.

ಫ್ರಾಯಡ್ ಕಾಮದ ಬಗ್ಗೆ ನೀಡಿದ ವಿಪರೀತದ ಒತ್ತಿನ ಬಗ್ಗೆ ಕೂಡಾ ಕಾರೆನ್‌ಗೆ ಅಭಿಪ್ರಾಯಭೇದವಿತ್ತು. ಫ್ರಾಯಡ್‌ನ ತತ್ವಗಳಲ್ಲಿ ವ್ಯಕ್ತಿತ್ವದ ನಿರೂಪಣೆಯಲ್ಲಿ 'ಕಾಮ'ಕ್ಕೆ ಅತಿ ಹೆಚ್ಚು ಮಹತ್ವನ್ನು ನೀಡಲಾಗಿದೆ. ಫ್ರಾಯಡ್‌ನ ದೃಷ್ಟಿಯಲ್ಲಿ ಕಾಮವು ವ್ಯಕ್ತಿಯ ಬೆಳವಣಿಗೆಯ ಪ್ರತಿ ಹಂತದಲ್ಲೂ ಮುಖ್ಯ ಪಾತ್ರ ವಹಿಸುತ್ತದೆ. ಫ್ರಾಯಡ್‌ನ ಪ್ರಕಾರ ವ್ಯಕ್ತಿಯ ವರ್ತನೆ ಮತ್ತು ಸ್ವಭಾವ ಆಳವೂ, ಬದಲಾಯಿಸಲು ಕಷ್ಟಸಾಧ್ಯವೂ ಆಗಿತ್ತು. ಮನುಷ್ಯರ ಗುಣ, ಸ್ವಭಾವವನ್ನು ಕುರಿತಂತೆ ಫ್ರಾಯಿಡ್‌ನ ಈ ನಿರಾಶಾದಾಯಕ ಸಿದ್ಧಾಂತಗಳಿಗೆ ಕಾರೆನ್ ಸವಾಲೆಸೆದಳು. 'ವ್ಯಕ್ತಿಯ ವರ್ತನೆಯನ್ನು ಬದಲಾಯಿಸಬಹುದು' ಎಂಬುದಷ್ಟೇ ಅಲ್ಲ 'ಆತನ ವರ್ತನೆಯನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು' ಎಂಬಂಥ ಹಾರ್ನಿಯ ಹೊಸ ಸಿದ್ಧಾಂತಗಳು, ಅಲ್ಲಿಯವರೆಗೂ ಸ್ಥಗಿತಗೊಂಡ ವಿಚಾರಗಳಿಗೆ ಚಾಲನೆಯನ್ನು ನೀಡಿದವು. ಹಾರ್ನಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಭಾವಗಳಿಗೆ ಹೆಚ್ಚಿನ ಆದ್ಯತೆಯನ್ನು ಕೊಟ್ಟಳು. ಮನುಷ್ಯನು ತನ್ನ ಸ್ವಭಾವವನ್ನು ಬದಲಾಯಿಸಿಕೊಳ್ಳಬಲ್ಲನೆಂದು ಹಾರ್ನಿ ಬಲವಾಗಿ ನಂಬಿದ್ದಳು. ಮನೋಬೇನೆಗೆ ಬಲಿಯಾದ ವ್ಯಕ್ತಿ ಪರಿಸ್ಥಿತಿ ಬಗ್ಗೆ ತನ್ನ ಭಾವನೆಗಳನ್ನು ಬದಲಾಯಿಸಿಕೊಳ್ಳಬಲ್ಲನೆಂದು ಆಕೆ ತಿಳಿದಿದ್ದಳು. ಆದ್ದರಿಂದಲೇ ಮನೋಬೇನೆಗಳನ್ನು ಮನೋವಿಶ್ಲೇಷಣಾ ಚಿಕಿತ್ಸೆಯ ಮೂಲಕ ಗುಣಪಡಿಸಬಹುದೆಂದು ಸ್ಪಷ್ಟವಾಗಿ ತಿಳಿಸಿದಳು. ಆರೋಗ್ಯಕರವಾದ ಪರಿಸರ ಪ್ರಕ್ಷುಬ್ಧ ಪರಿಸ್ಥಿತಿಗಳನ್ನು ಎದುರಿಸಲು ಎದುರಿಸಲು ನೆರವಾಗುತ್ತದೆ ಎಂಬ ಹಾರ್ನಿಯ ವಿಚಾರಗಳು ಸಾಮಾನ್ಯ ಜನರಿಗೂ ಅರ್ಥವಾಗುವಷ್ಟು ಸರಳವಾಗಿದ್ದವು. ಶ್ರೀ ಸಾಮಾನ್ಯರೂ ತಮ್ಮ ಪರಿಸರವನ್ನು ಆರೋಗ್ಯಪೂರ್ಣ ಮಾಡುವಲ್ಲಿ ಪಾತ್ರ ವಹಿಸಲು ಸಾಧ್ಯವಿತ್ತು. ಹತಾಶೆಯ ಬದಲು ಆಶಾವಾದವನ್ನು ಹಾರ್ನಿಯ ವಿಚಾರಗಳು ಮೂಡಿಸಿದ್ದವು. ಅಸಹಾಕತೆಯ ಬದಲು 'ಬದಲಾಗಬಹುದು, ಬದಲಾಯಿಸಬಹುದು, ಇವೆಲ್ಲವೂ ಸಾಧ್ಯ'ವೆಂಬ ಭರವಸೆಯನ್ನು ಹಾರ್ನಿ ಪ್ರತಿಪಾದಿಸಿದ್ದಳು.

ಮನೋಬೇನೆಯನ್ನು ಉಂಟುಮಾಡುವಲ್ಲಿ ಅಥವಾ ಅದನ್ನು ನಿಯಂತ್ರಿಸುವಲ್ಲಿ ಹಾರ್ನಿ ಸಾಮಾಜಿಕ ಪರಿಸ್ಥಿತಿಗಳಿಗೆ ಇಷ್ಟು ದಿನ ಇಲ್ಲದೇ ಹೋಗಿದ್ದ ಆದ್ಯತೆಯನ್ನು ನೀಡಿದಳು. ವ್ಯಕ್ತಿಯ ಮನಸ್ಸಿನ ಮೇಲೆ ಕುಟುಂಬ ಮತ್ತು ಸುತ್ತಲಿನ ಸಮಾಜದ ಪ್ರಭಾವವನ್ನು ಮೊಟ್ಟ ಮೊದಲಿಗೆ ಗುರುತಿಸಿದಳು. ಪರಿಸರ, ವಾತಾವರಣ ಮನುಷ್ಯನೊಬ್ಬನ ಮಾನಸಿಕ ಆರೋಗ್ಯದ ಬಗ್ಗೆ ಮಾಡುವ ಪರಿಣಾಮಗಳನ್ನು ಅಧ್ಯಯನ

ಮಾಡಿ, ಸಿದ್ಧಾಂತಗಳಾಗಿ ಪ್ರತಿಪಾದಿಸಿದ ಕೀರ್ತಿ ಕಾರೆನ್ ಹಾರ್ನಿಯದು.

ಫ್ರಾಯಡ್ ಮನೋಬೇನೆಯು ವ್ಯಕ್ತಿಯ ಭಗ್ನವಾದ ಕಾಮವಾಂಛೆಯಿಂದಾಗುವುದೆಂದು ತಿಳಿಸಿದ್ದನು. ಕಾಮ ವಾಂಛೆಗೆ ವಿಪರೀತದ ಮಹತ್ವ ಕೊಡಲಾಗಿದೆ ಎಂದ ಹಾರ್ನಿ, ಈ ಅಂಶವನ್ನು ಸಂಪೂರ್ಣವಾಗಿ ತಿರಸ್ಕರಿಸಿದಳು. ವ್ಯಕ್ತಿಯ ವರ್ತನೆಯನ್ನು ಸಮರ್ಪಕವಾಗಿ ಅರ್ಥಮಾಡಿಕೊಳ್ಳಲು ಸಮಾಜ ವಿಜ್ಞಾನದ ಅರಿವು, ಮನೋವಿಜ್ಞಾನದ ಅರಿವಿನಷ್ಟೇ ಅವಶ್ಯಕ ಎಂದು ಹಾರ್ನಿ ತಿಳಿಸಿದಳು. ಕೆಲವು ವೇಳೆ ಒಂದು ಸಂಸ್ಕೃತಿ, ಸಮಾಜದಲ್ಲಿ 'ಸರಿ' ಎಂದು ಪರಿಗಣಿಸಲ್ಪಟ್ಟ ವರ್ತನೆ ಬೇರೊಂದು ಸಮಾಜದಲ್ಲಿ ತಪ್ಪಾಗಿ ಕಾಣಬಹುದು. ಇಲ್ಲ ಅದೇ ಸಂಸ್ಕೃತಿಯಲ್ಲಿ ಕೆಲ ಕಾಲದ ನಂತರ ತಪ್ಪೆಂದು ಪರಿಗಣಿಸಲ್ಪಡಬಹುದು. ಇವೆಲ್ಲವನ್ನೂ ಆಮೂಲಾಗ್ರವಾಗಿ ಅರ್ಥ ಮಾಡಿಕೊಳ್ಳಬೇಕಾದ ಅಗತ್ಯವಿದೆ. ಇಂದು ಮನೋವಿಜ್ಞಾನ' (Social Psychology) ಎಂಬ ಪ್ರಭೇದವಾಗಿ ಬೆಳೆದು ನಿಂತಿದೆ.

ಮಗುವಿಗೆ ತನ್ನ ವಿರುದ್ಧ ಲಿಂಗದ ಪೋಷಕರಲ್ಲಿ ಉಂಟಾಗುವ ಮತ್ಸರ ಭಾವನೆಯೇ 'ಈಡಿಪಸ್' ಮತ್ತು 'ಎಲೆಕ್ಟ್ರಾ' ಕಾಂಪ್ಲೆಕ್ಸ್‌ಗಳಿಗೆ ಕಾರಣ ಎಂದು ಫ್ರಾಯಡ್ ತಿಳಿಸಿದ್ದ. ಆದರೆ ಕಾರೆನ್ ಇದು ಪ್ರಪಂಚದ ಎಲ್ಲಾ ಸಂಸ್ಕೃತಿಗಳಿಗೂ ಅನ್ವಯವಾಗುವುದೆಂಬ ವಿಚಾರವನ್ನು ಒಪ್ಪಲಿಲ್ಲ. ಹಾರ್ನಿಯ ನಿರ್ಮಿಸಿದ ನಿಯಮಗಳಿಂದ ಉಂಟಾದುದು. ಫ್ರಾಯಡ್‌ನ ಅಭಿಪ್ರಾಯದಲ್ಲಿ - ಶೈಶವದಲ್ಲಿ ಮಗು ಮತ್ತು ತಾಯಿಯ ನಡುವಣ ಅತಿಯಾದ ಆಸ್ತೆ ಬಾಂಧವ್ಯವನ್ನು ಫ್ರಾಯಡ್ 'ಈಡಿಪಸ್ ಕಾಂಪ್ಲೆಕ್ಸ್' ಎಂದು ಕರೆದಿದ್ದ. ತಂದೆ ಅಥವಾ ತಾಯಿಗೆ ಮಗು ಅಂಟಿಕೊಳ್ಳುವುದು 'ಈಡಿಪಸ್ ಕಾಂಪ್ಲೆಕ್ಸ್' ಅನ್ನು ತೋರುವುದಿಲ್ಲ, ಮಗು ಮತ್ತು ಪಾಲಕರ ನಡುವಿರುವ ಕದಡಿದ ಪ್ರಕ್ಷುಬ್ಧ ಸಂಬಂಧವನ್ನು ತೋರಿಸುತ್ತದೆ ಎಂದು ಕಾರೆನ್ ಪ್ರತಿಪಾದಿಸಿದಳು.

ಮಾಂಸದ ಮುದ್ದೆಯಾದ ಮಗುವು ಸಮಾಜದಲ್ಲಿ ಮನುಷ್ಯನಾಗುತ್ತದೆ. ಹಾರ್ನಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಭಾವಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಿದಳು. ಬೆಳೆಯುತ್ತಿರುವ, ಬದಲಾಗುತ್ತಿರುವ, ಸ್ಪರ್ಧಾತ್ಮಕ, ಅನಿಶ್ಚಿತಯದ ಇಂದಿನ ಸಮಾಜದಲ್ಲಿ ವ್ಯಕ್ತಿಗೆ ಭದ್ರವಾದ ಆಸರೆಯೆಂದರೆ 'ಮನೆ'. ಹಾರ್ನಿಯು ವ್ಯಕ್ತಿಗೆ ಉತ್ತಮ ವಾತಾವರಣ ಕಲ್ಪಿಸುವಲ್ಲಿ ತಾಯಿ ತಂದೆ ಇಬ್ಬರ ಪಾತ್ರವನ್ನೂ ಒತ್ತಿ ಹೇಳಿದಳು. 1939ರಲ್ಲಿ ಆಕೆ ಬರೆದ 'ನ್ಯೂ ವೇಸ್ ಇನ್ ಸೈಕೋಅನಲಿಸಿಸ್' ಫ್ರಾಯಡ್‌ನ ಸಿದ್ಧಾಂತಗಳನ್ನು ಪುನರ್ ವಿಮರ್ಶಿಸಿದ್ದವು, ಪುನರ್ ವಿಶ್ಲೇಷಿಸಿದ್ದವು. ಇದರಿಂದ ದೊಡ್ಡ ಕೋಲಾಹಲವೇ ಎದ್ದು, 1941ರಲ್ಲಿ ಕಾರೆನ್, 'ನ್ಯೂಯಾರ್ಕ್ ಮನೋವಿಶ್ಲೇಷಣಾ ಸಂಸ್ಥೆ'ಯಿಂದ ಹೊರಬರಬೇಕಾಯಿತು. ಅದೇ ವರ್ಷ ಕಾರೆನ್ 'ಅಸೋಸಿಯೇಷನ್ ಫಾರ್ ದಿ ಅಡ್ವಾನ್ಸಮೆಂಟ್ ಆಫ್ ಸೈಕೋಅನಲಿಸಿಸ್' ಮತ್ತು 'ಅಮೆರಿಕನ್ ಇನ್‌ಸ್ಟಿಟ್ಯೂಟ್ ಆಫ್ ಸೈಕೋಅನಲಿಸಿಸ್' ಸಂಸ್ಥೆಗಳನ್ನು ಸ್ಥಾಪಿಸಿದಳು. ಅಷ್ಟೇ ಅಲ್ಲ 'ಅಮೆರಿಕನ್ ಜರ್ನಲ್ ಆಫ್ ಸೈಕೋಅನಲಿಸಿಸ್' ಪತ್ರಿಕೆಯ ಸಂಪಾದಕಳಾದಳು.

1942ರಲ್ಲಿ ಬರೆದಿರುವ 'ಸೆಲ್ಫ್ ಅನಾಲಿಸಿಸ್' ಪುಸ್ತಕದಲ್ಲಿ ಕಾರೆನ್, ವ್ಯಕ್ತಿಯಿಂದಲೇ ಸೃಷ್ಟಿಸಲ್ಪಟ್ಟ ವ್ಯಕ್ತಿಯ ಸಮಸ್ಯೆಗಳನ್ನು ಮಂಡಿಸಿ, ಅವುಗಳ ನಿವಾರಣೆಯಲ್ಲಿ ವ್ಯಕ್ತಿಯ ಪಾತ್ರವನ್ನು ವಿವರಿಸಿದಳು. 1945ರಲ್ಲಿ 'ಅವರ್ ಇನ್ನರ್ ಕಾನ್‌ಫ್ಲಿಕ್ಟ್' ಪುಸ್ತಕವನ್ನು, 1950ರಲ್ಲಿ 'ನ್ಯೂರಾಸಿಸ್ ಅಂಡ್ ಹ್ಯೂಮನ್ ಗ್ರೋತ್' ಪುಸ್ತಕವನ್ನೂ ಬರೆದಳು. ಪ್ರತಿವ್ಯಕ್ತಿಗೂ ತಾನು ಹೇಗಿರಬೇಕೆಂಬ ಆದರ್ಶದ ಕಲ್ಪನೆಯಿರುತ್ತದೆ. ಆದರೆ ಒಂದು ಆದರ್ಶಕ್ಕೆ ತಕ್ಕಂತೆ ಸದಾ ಬದುಕಲು ಸಾಧ್ಯವಾಗುವುದಿಲ್ಲ. ವ್ಯಕ್ತಿಯ ಕಲ್ಪನೆಗಳನ್ನೂ, ಅವನ ಪ್ರಯತ್ನಗಳನ್ನೂ, ಮನೋಬೇನೆಯು ಉಂಟಾಗುವ ರೀತಿಯನ್ನೂ ಇಲ್ಲಿ ಚರ್ಚಿಸಿದಳು. ಕಾರೆನ್ ಹಾರ್ನಿಯ ಮಹತ್ವದ ಕೃತಿ 'ಫೆಮಿನೈನ್ ಸೈಕಾಲಜಿ' ಎಂಬುದು. ಸ್ತ್ರೀ ಪುರುಷರ ನಡುವಿನ ಭಿನ್ನವರ್ತನೆಗೆ ಸಂಸ್ಕೃತಿ ಹೇಗೆ ಕಾರಣವಾಗುತ್ತದೆಂದು ಇಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾಳೆ. ಸ್ತ್ರೀತ್ವ ಮತ್ತು ಪುರುಷತ್ವದ ಕಲ್ಪನೆ ಹೇಗೆ ಸಂಸ್ಕೃತಿಯಿಂದ ಸಂಸ್ಕೃತಿಗೆ ಬೇರೆಯಾಗಿವೆಯೆಂದು ಅವಲೋಕಿಸಿದ್ದಾಳೆ.

ಹಾರ್ನಿಯ 'ಸ್ವಯಂ ವಿಶ್ಲೇಷಣೆಯ' ಹೊಸ ವಿಧಾನಗಳು ಸಾಮಾನ್ಯ ಜನರಿಗೂ, ಮನೋಬೇನೆಗೆ ಗುರಿಯಾದವರಿಗೂ ಬಹಳಷ್ಟು ನೆರವಾದವು. ತನ್ನ ಜೀವನದುದ್ದಕ್ಕೂ ಮನೋಬೇನೆಗೆ ತುತ್ತಾದವರನ್ನು ಅಧ್ಯಯನ ಮಾಡಿ ಅರ್ಥ ಮಾಡಿಕೊಂಡ ಹಾರ್ನಿಯ ಸಿದ್ಧಾಂತಗಳು ಆಕೆಯ ವಾಸ್ತವದ ಅಧ್ಯಯನದಿಂದ ಮೂಡಿ ಬಂದವು. ವ್ಯಕ್ತಿ ಸಮಾಜದ ಅವಿಭಾಜ್ಯ ಅಂಗ ಎಂಬುದನ್ನು, ವ್ಯಕ್ತಿತ್ವದ ಮೇಲೆ ಪರಿಸರದ ಪ್ರಭಾವವನ್ನೂ, ವಿವರಿಸಿದ ಪ್ರಮುಖ ವಿಜ್ಞಾನಿ ಈಕೆ. ಆರೋಗ್ಯಕರವೂ, ಪ್ರೋತ್ಸಾಹದಾಯಕವೂ ಆದ ಸಂಸ್ಕೃತಿಯ ಆರೋಗ್ಯಕರ ವ್ಯಕ್ತಿಗಳನ್ನು ಸೃಷ್ಟಿಸುತ್ತದೆ ಎಂದು ತಿಳಿಸಿ ಸಮಾಜದ ಹೊಣೆಯತ್ತ ಹಾರ್ನಿ ಗಮನ ಸೆಳೆದಳು. ವ್ಯಕ್ತಿಯ ಬೆಳವಣಿಗೆಗೆ ಆಧಾರವಾದ, ಅಡಿಪಾಯವಾದ ಮನೆಯ ಪಾತ್ರವನ್ನು, ತಂದೆ ತಾಯಿ ಇಬ್ಬರ ಹೊಣೆಯನ್ನು ವಿವರಿಸಿದಳು. 'ಹೋರಾಟದಿಂದ ಬಾಳು ಬದಲಾಗಲು ಸಾಧ್ಯ. ಬದಲಾವಣೆಯಿಂದ ಹೊಂದಾಣಿಕೆ ಸಾಧ್ಯ. ಮನೋರೋಗಿಗಳು ಬದಲಾಗಬಲ್ಲರು' ಎಂದು ಬಾಳಿನಲ್ಲಿ ಭರವಸೆಯನ್ನು ತಂದ ವಿಜ್ಞಾನಿ ಕಾರೆನ್ ಹಾರ್ನಿ. ಕಾರೆನ್ ಪ್ರಾಧ್ಯಾಪಕಿ, ರೋಗಚಿಕಿತ್ಸಕಿ ಮತ್ತು ಲೇಖಕಿ. ನವ್ಯ ಫ್ರಾಯಡ್‌ವಾದಿಯಾದ ಈಕೆ ಸ್ತ್ರೀವಾದಿ ಮತ್ತು ಮಾನವತಾವಾದಿ. ರೂಢಿಗತ ವಿಚಾರಗಳನ್ನು ತಿರಸ್ಕರಿಸಿ ಹೊಸ ಆಲೋಚನೆಗಳತ್ತ ದಿಟ್ಟ ಹೆಜ್ಜೆ ಇಟ್ಟ ವಿಜ್ಞಾನಿ ಕಾರೆನ್ ಹಾರ್ನಿ.

1952ರಲ್ಲಿ ಕಾರೆನ್ ಹಾರ್ನಿ ಹೊಟ್ಟೆಯ ಕ್ಯಾನ್ಸರಿನಿಂದ ಮೃತಳಾದಳು. ಆಕೆಯ ಸಾವಿಗೆ ಮುನ್ನ ನ್ಯೂಯಾರ್ಕಿನಲ್ಲಿ 'ಕಾರೆನ್ ಹಾರ್ನಿ ಕ್ಲಿನಿಕ್' ತೆರೆಯಲಿದೆ ಎಂಬ ವಿಷಯ ಆಕೆಗೆ ತಿಳಿಯಿತು.

# ಉನ್ನತ ಶಿಕ್ಷಣ ಮತ್ತು ಮಹಿಳೆ

ಡಾ। ಎ. ಎಸ್. ದೇಸಾಯಿ

ಇಂದು ಜಾಗತಿಕ ನಕ್ಷೆಯಲ್ಲಿ ನಡೆಯುತ್ತಿರುವ ಬೃಹತ್ ಬದಲಾವಣೆಗಳ ಹಿನ್ನೆಲೆಯಲ್ಲಿ ಭಾರತವು ಹಲವಾರು ಸವಾಲುಗಳನ್ನು ಎದುರಿಸಬೇಕಾಗಿದೆ. ಭಾರತದ ವಿಶ್ವವಿದ್ಯಾನಿಲಯಗಳೂ ಇಂದಿನ ಸಮಾಜದ ತುರ್ತು ಅಗತ್ಯಗಳನ್ನು ಗಮನದಲ್ಲಿಟ್ಟುಕೊಂಡು ತಮ್ಮ ವ್ಯಾಪ್ತಿ, ಆಳ, ವೈವಿಧ್ಯಗಳನ್ನು ಹೆಚ್ಚಿಸಿಕೊಳ್ಳಬೇಕಿದೆ. ಅಷ್ಟೇ ಅಲ್ಲದೆ, ಸಮಾಜದಲ್ಲಿರುವ ಅವಕಾಶ ವಂಚಿತರ ದೃಷ್ಟಿಯಿಂದಲೂ ವಿಶ್ವವಿದ್ಯಾನಿಲಯಗಳು ಹೆಚ್ಚು ಕ್ರಿಯಾಶೀಲವಾಗಿ ಕೆಲಸ ಮಾಡಬೇಕಿದೆ. ಕ್ರಿಯೆ-ಪ್ರತಿಕ್ರಿಯೆ-ಸಂವಾದಗಳಿಗೆ ಹೆಚ್ಚು ಒತ್ತು ಬೀಳುವಂತೆ ಮೌಲ್ಯಾಧಾರಿತ ಶಿಕ್ಷಣಕ್ಕೆ ಆದ್ಯತೆ ನೀಡಬೇಕಿದೆ. ವಿಶ್ವವಿದ್ಯಾನಿಲಯದ ವ್ಯವಸ್ಥೆಯು ಸಾಮಾಜಿಕ ಬದಲಾವಣೆಯ ಹರಿಕಾರನಾಗಬೇಕಾದ ಅಗತ್ಯವಿದೆ. 9ನೇ ಪಂಚವಾರ್ಷಿಕ ಯೋಜನೆಯಲ್ಲಿ ಒಂದು ಪೂರ್ಣ ಅಧ್ಯಾಯವನ್ನೇ ಈ ವಿಷಯಕ್ಕೆ ಮೀಸಲಿಡಲಾಗಿದೆ.

### ಉನ್ನತ ಶಿಕ್ಷಣ ವ್ಯವಸ್ಥೆ ಮತ್ತು ಮಹಿಳೆ

ಇಂದು ನಮ್ಮ ದೇಶದಲ್ಲಿ ಐದು ಮಹಿಳಾ ವಿಶ್ವವಿದ್ಯಾಲಯಗಳು ಮತ್ತು 1195 ಮಹಿಳಾ ಕಾಲೇಜುಗಳೂ ಅಸ್ತಿತ್ವದಲ್ಲಿವೆ. ಕಲ್ಕತ್ತೆಯಲ್ಲಿ 1877ರಲ್ಲಿ ಮೊದಲ ಮಹಿಳೆ ಕಾಲೇಜು ಪ್ರವೇಶಿಸಿದಳು 1881ರಲ್ಲಿ ಎರಡನೆಯ ಮಹಿಳೆ ಚೆನ್ನೈನಲ್ಲಿ ಮತ್ತು ಮೂರನೆಯ ಮಹಿಳೆ ಮುಂಬೈ ವಿಶ್ವವಿದ್ಯಾಲಯದಲ್ಲಿ ಕಾಲೇಜು ಪ್ರವೇಶಿಸಿದಳು. ಆದರೆ ಭಾರತದಲ್ಲಿ ವಿಶ್ವವಿದ್ಯಾಲಯಗಳು 1857ರಲ್ಲೇ ಆರಂಭವಾಗಿದ್ದವು. ಭಾರತದಲ್ಲಿ ಮಹಿಳೆ ಕಾಲೇಜು ಮೆಟ್ಟಿಲು ಹತ್ತಿ 123 ವರ್ಷಗಳೇ ಸಂದಿದ್ದರೂ ಈ ದಿಕ್ಕಿನಲ್ಲಿ ಮಹಿಳೆಯರು ಇನ್ನೂ ಬಹಳಷ್ಟು ಸಾಧಿಸಬೇಕಿದೆ.

ಹುಡುಗಿಯರು ಪದವಿಗಳಿಗಾಗಿ ಆಯ್ದುಕೊಳ್ಳುವ ವಿಷಯಗಳನ್ನು ಗಮನಿಸಿದಾಗ ಕಲಾ ವಿಭಾಗಗಳಿಗಾಗಿ ಹೆಚ್ಚಿನ ಮಹಿಳೆಯರು ಮತ್ತು ವಿಜ್ಞಾನ ಮತ್ತು ವಾಣಿಜ್ಯ ವಿಷಯಗಳಿಗೆ ಹುಡುಗರು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಆದರೆ ಇತ್ತೀಚೆಗೆ ವಿಜ್ಞಾನ ಕ್ಷೇತ್ರಕ್ಕೂ ಹುಡುಗಿಯರು ಹೆಚ್ಚಿನ ಸಂಖ್ಯೆಯಲ್ಲಿ ಧಾವಿಸಿ ಬರುವುದು ಕಂಡುಬರುತ್ತಿದೆ. ಶಿಕ್ಷಣ ಮತ್ತು ಬೋಧನ ಕ್ಷೇತ್ರಗಳಲ್ಲಿ ಬಿಟ್ಟರೆ, ಹುಡುಗಿಯರು ಪುರುಷರಿಗಿಂತ ಕಡಿಮೆ ಸಂಖ್ಯೆಯಲ್ಲಿ ಇದ್ದಾರೆ.

ಸಾಂಪ್ರದಾಯಿಕ ಕ್ಷೇತ್ರಗಳಲ್ಲೂ ಮಹಿಳೆಯರ ಪ್ರವೇಶ ಪುರುಷರಿಗಿಂದ ಸ್ವಲ್ಪ ಕಡಿಮೆಯೇ ಇದೆ. ಈ ಸಮಸ್ಯೆಯನ್ನು ಎರಡು ನಿಟ್ಟಿನಿಂದ ಎದುರಿಸಬಹುದು :- ಮಾನವಿಕ ಶಾಸ್ತ್ರ ವಿಜ್ಞಾನ ಮುಂತಾದ ವಿಷಗಳ ಬಗ್ಗೆ ವಿದ್ಯಾರ್ಥಿಗಳಲ್ಲಿರುವ ಪೂರ್ವಗ್ರಹಗಳನ್ನು ಹೋಗಲಾಡಿಸುವ ದಿಕ್ಕಿನಲ್ಲಿ ಆ ಶಿಸ್ತುಗಳಲ್ಲಿರುವ ಪಠ್ಯವನ್ನು ಗಮನದಲ್ಲಿಟ್ಟುಕೊಂಡು ಪುನರ್ರಚಿಸುವುದು. ಎರಡನೆಯದಾಗಿ ಹುಡುಗಿಯರ ಸಂಖ್ಯೆ ಕಡಿಮೆಯಿರುವ ಶಿಸ್ತುಗಳಾದ ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿ ವಿಷಯಗಳಿಗೆ ಪ್ರವೇಶಿಸಲು ಅನುಕೂಲ ಹೆಚ್ಚಿಸುವುದು. ಈ ಎರಡೂ ಅಂಶಗಳಿಗೆ ವಿಶ್ವವಿದ್ಯಾಲಯ ಅನುದಾನ ಆಯೋಗವು ಗಮನಕೊಡುತ್ತಿದೆ. 1994ರಲ್ಲಿಯೇ ಪದವಿಪೂರ್ವ ತರಗತಿಗಳಲ್ಲಿ ವೃತ್ತಿಪರ ಕೋರ್ಸ್‌ಗಳನ್ನು ಆರಂಭಿಸಿದಾಗ ಹೆಚ್ಚು ಹುಡುಗಿಯರನ್ನು ಈ ವಿಷಯಗಳಿಗೆ ಆಕರ್ಷಿಸುವ ಉದ್ದೇಶವೂ ಇತ್ತು. ಮುಂಬೈಯ SNDT ಮಹಿಳಾ ವಿಶ್ವವಿದ್ಯಾಲಯದ ಸಲಹೆಯಂತೆ ಎಲ್ಲಾ ಐದು ಮಹಿಳಾ ವಿಶ್ವವಿದ್ಯಾಲಯಗಳಲ್ಲಿ ಎಂಜಿನಿಯರಿಂಗ್ ಕಾಲೇಜುಗಳನ್ನು ಆರಂಭಿಸುವ ಆಲೋಚನೆ 8ನೇ ಪಂಚವಾರ್ಷಿಕ ಯೋಜನೆಯಲ್ಲಿ ಮೂಡಿ ಬಂದಿತ್ತಾದರೂ ಹಣಕಾಸಿನ ಕೊರತೆಯಿಂದ ಸಂಪೂರ್ಣವಾಗಿ ಮಾಡಲಾಗಿಲ್ಲ. ಆದರೂ ಈ ದಿಕ್ಕಿನಲ್ಲಿ ಕಾರ್ಯ ಪ್ರವೃತ್ತವಾಗುವುದೂ ಮುಖ್ಯ.

ರಾಷ್ಟ್ರೀಯ ಶಿಕ್ಷಣ ಕ್ರಿಯಾಯೋಜನೆಯು "ಕೇಂದ್ರ ಮತ್ತು ರಾಜ್ಯ ಯೋಜನಾತಜ್ಞರು, ಪಠ್ಯರಚನಕಾರರು ಮತ್ತು ಶಿಕ್ಷಣ ಆಡಳಿಗಾರರು ಅತ್ಯಂತ ಗಂಭೀರವಾದ ಪ್ರಯತ್ನಗಳನ್ನು ನಡೆಸಿ ಹುಡುಗಿಯರು ಅಸಾಂಪ್ರದಾಯಿಕ ಮತ್ತು ತಾಂತ್ರಿಕ ಪರಿಣತಿಯ ವಿಷಯಗಳನ್ನು ಅಭ್ಯಾಸ ಮಾಡುವಂತೆ ಮಾಡಬೇಕು" ಎಂದು ಅಭಿಪ್ರಾಯಪಟ್ಟಿದೆ. ಆದರೆ ವಿಶ್ವವಿದ್ಯಾಲಯ ಅನುದಾನ ಆಯೋಗವು ಈ ನಿಟ್ಟಿನಲ್ಲಿ ಮಹಿಳಾಪರ ದೃಷ್ಟಿಕೋನದಿಂದ ಕಾರ್ಯಪ್ರವೃತ್ತವಾಗಬೇಕಿದೆ.

ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲಿ ಹುಡುಗಿಯರ ಸಂಖ್ಯೆ ಹೆಚ್ಚಾಗಬೇಕಾದರೆ, ಹುಡುಗಿಯರಿಗೆ ಶಿಕ್ಷಣಕ್ಕೆ ಸಹಾಯವಾಗುವ ಸೂಕ್ತ ಸನ್ನಿವೇಶ ನಿರ್ಮಾಣವಾಗಬೇಕು. ಹುಡುಗಿಯರಿಗೆ ಪ್ರತ್ಯೇಕ ಸೌಲಭ್ಯಗಳು, ಹಾಸ್ಟೆಲ್‌ಗಳ ವ್ಯವಸ್ಥೆಯಾದಲ್ಲಿ ಉನ್ನತ ಶಿಕ್ಷಣಕ್ಕೆ ಹುಡುಗಿಯರು ಆಕರ್ಷಿತರಾಗಬಹುದು. ಶಾಲಾ ಶಿಕ್ಷಣದ ಹಂತದಲ್ಲೂ ಹುಡುಗಿಯರ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯ ಅಗತ್ಯವಿದೆ. ತಾಲ್ಲೂಕು, ಜಿಲ್ಲಾ ಹಂತಗಳಲ್ಲೂ ಹುಡುಗಿಯರಿಗೆ ಹಾಸ್ಟೆಲ್ ಸೌಕರ್ಯಗಳಿದ್ದಲ್ಲಿ ಪ್ರೌಢ ಶಾಲಾ ಶಿಕ್ಷಣಕ್ಕೆ ಬರುವ ವಿದ್ಯಾರ್ಥಿನಿಯರ ಸಂಖ್ಯೆಯೂ ಹೆಚ್ಚಿ ಅವರು ಉನ್ನತ ಶಿಕ್ಷಣದಲ್ಲೂ ಆಸಕ್ತಿ ತೋರಬಹುದು. ತಾಯ್ತಂದೆಯರೂ ಕೂಡ ಹೆಣ್ಣು ಮಕ್ಕಳು ಚಿಕ್ಕ ವಯಸ್ಸಿನಲ್ಲಿ ಶಾಲೆಗೆ ಹೋಗುವಾಗ ಕ್ಷೇಮವಾದ ವಾತಾವರಣವನ್ನು ನಿರೀಕ್ಷಿಸುವುದು ಸಹಜ. ಇಂತಹ ವಾತಾವರಣವನ್ನು ಶಾಲಾ ಹಂತದಲ್ಲಿಯೇ ನಿರ್ಮಿಸಿದಲ್ಲಿ ಉನ್ನತ ಶಿಕ್ಷಣಕ್ಕೆ ಬರುವ ವಿದ್ಯಾರ್ಥಿನಿಯರ ಸಂಖ್ಯೆ ಹೆಚ್ಚು.

# ಮಹಿಳಾ ಶಿಕ್ಷಣ ಮತ್ತು ರಾಷ್ಟ್ರೀಯ ಅಭಿವೃದ್ಧಿ

ದೇಶದ ಸಾಮಾಜಿಕ ಬೆಳವಣಿಗೆಯ ದೃಷ್ಟಿಯಿಂದ ಶಿಕ್ಷಣವು ಒಂದು ಅಗತ್ಯವಾದ ಬದ್ಧತೆಯಾಗಿದೆ ನಮ್ಮ ದೇಶದ ಸರ್ವತೋಮುಖ ಬೆಳವಣಿಗೆಗೆ, ಲಿಂಗ ಸಮಾನತೆ, ಆರ್ಥಿಕ ಅಭಿವೃದ್ಧಿ ಹಾಗೂ ಸಾಮಾಜಿಕ ರಚನೆಯ ಅಭಿವೃದ್ಧಿ, ಶಿಕ್ಷಣ, ಆರೋಗ್ಯ ಮುಂತಾದ ಸಾಮಾಜಿಕ ಆದರ್ಶಗಳನ್ನು ಸಾಧಿಸಲು ಶಿಕ್ಷಣವು ಅತ್ಯಂತ ಮುಖ್ಯ ಅಂಶವಾಗಿದೆ. ಮಹಿಳಾ ಅನರಕ್ಷತೆಯ ನಿರ್ಮೂಲನೆ, ಮಹಿಳೆಯರಿಗೆ ಸಾರ್ವತ್ರಿಕ ಶಿಕ್ಷಣಗಳು ಈಗ ಗಮನಿಸಲೇಬೇಕಾದ ಅಂಶಗಳಾಗಿವೆ.

ರಾಷ್ಟ್ರದ ಅಭಿವೃದ್ಧಿ ಮತ್ತು ಮಹಿಳೆಯರ ಪ್ರಗತಿಯೆರಡೂ ಅರ್ಥಪೂರ್ಣ ಮತ್ತು ಸಾರ್ಥಕತೆಯ ಹಂತವನ್ನು ತಲುಪಬೇಕಾದರೆ ಅಲ್ಲಿ ಮಹಿಳೆಯರು ಸಂಪೂರ್ಣವಾಗಿ ಭಾಗಿಗಳಾಗಬೇಕಾಗುತ್ತದೆ. ಇದನ್ನು ಸಾಧಿಸಲು ಮಹಿಳೆಯರಿಗೆ ಸಂವಿಧಾನಾತ್ಮಕ ಹಕ್ಕುಗಳು ಮತ್ತು ಕಾನೂನಿನ ರಕ್ಷಣೆ ಮಾತ್ರ ಇದ್ದರೆ ಸಾಲದು, ಶಿಕ್ಷಣದ ಅವಕಾಶವೂ ಇರಬೇಕು ಇದನ್ನು ಸಾಧಿಸಲು ಲಿಂಗ ಸಮಾನತೆಯು ನಮ್ಮ ಸಂವಿಧಾನದ ಮೂಲಭೂತ ಅಂಶಗಳಲ್ಲೊಂದಾದರೂ ಅದನ್ನು ಜಾರಿಗೆ ತರುವಲ್ಲಿ ಶಿಕ್ಷಣ ಮಹತ್ವದ ಪಾತ್ರವಹಿಸಬೇಕು. ಆದರೆ ಈ ಪ್ರಕ್ರಿಯೆಗೆ ಅಡೆತಡೆಗಳನ್ನು ಒಡ್ಡುವಲ್ಲಿ ಆಳವಾಗಿ ಬೇರೂರಿರುವ ಸಾಂಸ್ಕೃತಿಕ ಶಕ್ತಿಗಳು, ಕೊಳೆತು ನಾರುವ ಮೌಲ್ಯ ವ್ಯವಸ್ಥೆ, ಲಿಂಗಬೇಧವಣಿಸುವ ಸಾಮಾಜಿಕ ಶಕ್ತಿಗಳು ಮಹತ್ವದ ಪಾತ್ರ ವಹಿಸುತ್ತಿವೆ. ಆದ್ದರಿಂದಲೇ ನಮ್ಮ ರಾಷ್ಟ್ರದ ಯೋಜನಾ ನೀತಿ ಮತ್ತು ಕಾರ್ಯಕ್ರಮಗಳಲ್ಲಿ ಮಹಿಳೆಯರ ಸಶಕ್ತೀಕರಣಕ್ಕೆ ಹೆಚ್ಚಿನ ಆದ್ಯತೆ ದೊರಕುತ್ತಿದೆ.

ಶಿಕ್ಷಣವು ಸಮಾಜವನ್ನು ಲಿಂಗಪೂರ್ವಗ್ರಹಗಳಿಂದ ಮುಕ್ತರನ್ನಾಗಿಸಬೇಕೆಂಬ ಅಂಶವು ನಿಜವಾದರೂ ನಿಜವಾದ ಅರ್ಥದಲ್ಲಿ ಆ ಕೆಲಸವನ್ನು ಮಾಡಲಾಗುತ್ತಿಲ್ಲ. ಶಿಕ್ಷಣಕ್ಕೆ ಪರ್ಯಾಯವಾಗಿ ಯಾವುದೇ ಸುಲಭದ ಹಾದಿಯಾಗಲಿ, ಸರಳ ತಂತ್ರವಾಗಲೀ ಇಲ್ಲ. ಇಂದು ಬೆಳೆಯುತ್ತಿರುವ ಮುಕ್ತ ಮಾರುಕಟ್ಟೆ ಮತ್ತು ಸರಕು ಜಗತ್ತಿನಲ್ಲಿ ಮಹಿಳೆಯರ ಸ್ಥಾನಮಾನವು ಮತ್ತಷ್ಟು ವ್ಯಾಪಾರೀಕರಣಕ್ಕೆ ಒಳಗಾಗಿ ಅತ್ಯಂತ ಹೀನಸ್ಥಿತಿಗೆ ತಳ್ಳಲ್ಪಟ್ಟಿದೆ. ವರದಕ್ಷಿಣೆ, ವಧೂದಹನದಂತಹ ಸಾಮಾಜಿಕ ಪಿಡುಗುಗಳೂ ಹೆಚ್ಚುತ್ತಿದೆ. ಹೆಚ್ಚಿನ ಶಿಕ್ಷಣದಿಂದಾಗಿ ಮಹಿಳೆಯರಿಗೆ ತಮ್ಮ ವ್ಯಕ್ತಿತ್ವದ ಘನತೆಯೂ ಹೆಚ್ಚಿ ಆತ್ಮ ವಿಶ್ವಾಸ ಮೂಡುತ್ತದೆ; ಪರಾವಲಂಬನೆಯು ತಪ್ಪಿ ಹೋಗಿ ಅಧಿಕಾರದ ಅನುಭವವೂ ದೊರೆಯುತ್ತದೆ. ಈ ಎಲ್ಲ ಸಾಧನೆಗಳೂ ಮಹಿಳೆಯರ ಪಾಲಿಗೆ ದಕ್ಕಬೇಕಾದರೆ, ವಿಶ್ವವಿದ್ಯಾನಿಲಯದಲ್ಲಿ ಪಠ್ಯಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನ ಮಾಡುವ, ಅಧ್ಯನದ ಹಲವಾರು ಸಾಧ್ಯತೆಗಳನ್ನು ರೂಡಿಸಿಕೊಳ್ಳುವ ಪ್ರವತ್ತಿ ಬೆಳೆಯಬೇಕು.

ಆದ್ದರಿಂದಲೇ ಸಾಮಾಜಿಕ ಪ್ರಗತಿಯು ಸಿದ್ಧಿಸಬೇಕಾದರೆ, ಸ್ತ್ರೀ ಶಿಕ್ಷಣವು ಪಿತೃ ಪ್ರಧಾನ ಸಮಾಜದ ಎಲ್ಲ ಸದಸ್ಯರ ಜಾಗೃತಿಯನ್ನೂ ಗಮನದಲ್ಲಿಟ್ಟುಕೊಂಡು ಲಿಂಗಭೇದವಿಲ್ಲದ ಪಠ್ಯ ಮತ್ತು ಕಾರ್ಯಕ್ರಮಗಳನ್ನು ರೂಪಿಸಬೇಕು ಸಮಾನ ದುಡಿಮೆಗೆ ಸಮಾನ ವೇತನದ ಕಾಯಿದೆ ಬಂದಿದ್ದಾಗ್ಯೂ ಮಹಿಳೆಯರು ವೇತನ ತಾರತಮ್ಯಕ್ಕೆ ಗುರಿಯಾಗುತ್ತಿದ್ದಾರೆ ಮತ್ತು ಉನ್ನತ ಹುದ್ದೆಗಳನ್ನು ಕೆಲವೇ ಮಹಿಳೆಯರು ಅಲಂಕರಿಸುತ್ತಾರೆ. ರಾಜಕೀಯ ಕ್ಷೇತ್ರಗಳಲ್ಲೂ ಇದೇ ಛಾಳಿಯನ್ನು ಕಾಣಬಹುದಾಗಿದೆ.

ಮಹಿಳಾ ವಿಶ್ವವಿದ್ಯಾಲಯಗಳು ಮಹಿಳೆಯರ ಕಾನೂನ ಸಾಕ್ಷರತೆ ಮತ್ತು ಮಹಿಳಾ ಪರ ಕಾರ್ಯಕ್ರಮಗಳತ್ತ ಗಮನ ಹರಿಸಬೇಕಿದೆ. ಮಹಿಳಾ ವಿಶ್ವವಿದ್ಯಾಲಯಗಳೇ ಈಗ ಚಾಲ್ತಿಯಲ್ಲಿರುವ ಲಿಂಗ ಪೂರ್ವಗ್ರಹಗಳನ್ನು ಸಮಾಜದಿಂದ ಹೊರಕ್ಕೆ ದಬ್ಬಬೇಕಾದ ಕಾರ್ಯ ನಿರ್ವಹಿಸಬೇಕಿದೆ. ಅವರು ಅವರ ವಿದ್ಯಾರ್ಥಿಗಳನ್ನು ಸಾಂಪ್ರದಾಯಿಕ ಶಿಕ್ಷಣವನ್ನೇ ಕೊಟ್ಟು ಮಹಿಳೆಯರನ್ನು ಕುರಿತ ಸಾಮಾಜಿಕ ದೃಷ್ಟಿಕೋನವನ್ನು ಬದಲಾಯಿಸದಿದ್ದರೆ, ಹಾಗೂ ಅವರಲ್ಲಿ ಸಾಮಾಜಿಕ ಬದಲಾವಣೆಯ ಆಕಾಂಕ್ಷೆಯನ್ನು ಬಿತ್ತದಿದ್ದರೆ ನವಸಮಾಜವನ್ನು ಕಟ್ಟುವ ಒಂದು ಅಪೂರ್ವವಾದ ಅವಕಾಶವನ್ನೇ ಕಳೆದುಕೊಂಡಂತಾಗುತ್ತದೆ.

### ಮಹಿಳಾ ಸಶಕ್ತೀಕರಣ

ಶಿಕ್ಷಣ ಮತ್ತು ಹೆಚ್ಚಿದ ಅರಿವಿನಿಂದ ಮಹಿಳೆಯರ ಸುಶಕ್ತೀಕರಣವು ಮುಖ್ಯ ಅಂಶವಾಗಿ ಮಹಿಳೆಯರ ಮುಂದಿರುವ ಸವಾಲುಗಳಾಗುತ್ತದೆ. ಚರಿತ್ರೆಯ ಯಾವ ಘಟ್ಟದಲ್ಲೂ ಸಂಘರ್ಷವಿಲ್ಲದೆ ಮಹಿಳೆಯರು ಏನನ್ನೂ ಸಾಧಿಸಿಲ್ಲ. ಜಾತಿ, ಮತ, ಪಂಥ, ವರ್ಗಗಳ ಬೇಧವಿಲ್ಲದೆ ಎಲ್ಲ ಮಹಿಳೆಯರೂ ಒಂದಾಗಿ ಹೋರಾಡಿದಾಗ ಸಶಕ್ತೀಕರಣ ಕನಸಾಗುತ್ತದೆ. ಸಂವಿಧಾನದ 73 ಮತ್ತು 74ನೇ ತಿದ್ದುಪಡಿಯಿಂದ ಮಹಿಳೆಯರ ರಾಜಕೀಯ ಸಶಕ್ತೀಕರಣದ ಪ್ರಕ್ರಿಯೆ ಆರಂಭವಾಗಿದೆ. ಆದ್ದರಿಂದ ಹೆಚ್ಚು ಹೆಚ್ಚು ಕಲಿತ, ವಿದ್ಯಾವಂತ ಮಹಿಳೆಯರು ಬೇರಿನ ಮಟ್ಟದಲ್ಲಿ ಪ್ರಜಾಪ್ರಭುತ್ವ ಶಕ್ತಿಗಳನ್ನು ಬಲಪಡಿಸುವ ಪ್ರಕ್ರಿಯೆಯಲ್ಲಿ ಒಂದಾಗಿ ಶಿಕ್ಷಣದ ಸಾರ್ಥಕತೆಗೆ ಅರ್ಥ ತರಬೇಕಿದೆ.

# ಸಂಚಾರೀ ಶಿಶು ಸಂರಕ್ಷಣಾ ಕೇಂದ್ರ

- ಬಿ.ವಿ. ಸುಭದ್ರಾ

ಬೆಂಗಳೂರಿನ ಶಿವಾಜಿನಗರದ ಒಂದು ರಸ್ತೆಯಲ್ಲಿ ಹೊರಟಿದ್ದೆ. ನನಗದು ಹೊಸ ಜಾಗ. ಇಕ್ಕೆಡೆಗಳನ್ನು ಗಮನಿಸುತ್ತಾ, ಹೊಸದೇನಾದರೂ ಕಣ್ಣಿಗೆ ಬಿದ್ದೀತೇ ? ಎಂದು ನೋಡುವುದೇ ನನ್ನ ಸ್ವಭಾವ. ಈ ರಸ್ತೆಯಲ್ಲೂ ಅದನ್ನೇ ಮಾಡಿದೆ.

ನನ್ನ ಬಲ ಪಕ್ಕದಲ್ಲಿ ಬೃಹತ್ ಕಟ್ಟಡಗಳ ಕೆಲಸ ನಡೆಯುತ್ತಿತ್ತು. ವಿಶಾಲವಾದ ಕಾಂಪೌಂಡ್. ಕೆಲಸಗಾರರು ಕಟ್ಟಡದಲ್ಲಿ ಕೆಲಸ ಮಾಡುತ್ತಿದ್ದರು. ಆದರೆ ಅಲ್ಲಿ ಹಸುಳೆಗಳನ್ನು ಆಡಿಸುತ್ತಾ ಇದ್ದ ಅನೇಕ ಶಿಸ್ತಿನ ಮಹಿಳೆಯರನ್ನು ಕಂಡೆ. ಇಲ್ಲಿ ಅದು ಯಾವ ನರ್ಸರಿ ಶಾಲೆ ನಡೆಯುತ್ತಿದೆಯೆಂದು ಒಳ ಹೊಕ್ಕಿದೆ.

ಆಕಾಶವಾಣಿ ಮೂಲಕ ಶಿಶು ಸಂರಕ್ಷಣಾ ಕೇಂದ್ರಗಳ ಬಗ್ಗೆ ಒಂದು ಕಾರ್ಯಕ್ರಮವನ್ನು ನೀಡಬೇಕಾಗಿದ್ದುದರಿಂದ ನಾನು ಅವುಗಳ ಬೇಟೆಯಲ್ಲಿ ಇದ್ದೆ. ಆ ಆವರಣದೊಳಗೆ ಪ್ರವೇಶಿಸಿ, ಆ ಮಕ್ಕಳ ಬಗ್ಗೆ, ಅಲ್ಲೇ ಇದ್ದ ಮಹಿಳೆಯರನ್ನು ವಿಚಾರಿಸಿದೆ. ಆಗಲೇ ನನಗೆ ತಿಳಿದಿದ್ದು ಕೂಲಿಗಾರರ ಕಂದಮ್ಮಗಳಿಗಾಗಿ ಅದೇ ಕಟ್ಟಡಗಳ ಆವರಣದಲ್ಲಿ ಬೆಂಗಳೂರಿನಂತ ಅನೇಕ ನಗರಗಳಲ್ಲಿ ಸಂಚಾರೀ ಶಿಶು ಸಂರಕ್ಷಣಾ ಕೇಂದ್ರಗಳು ಸ್ಥಾಪಿತಗೊಂಡಿವೆ ಎಂದು.

ಈ ಕೇಂದ್ರಗಳು ಕಟ್ಟಡದ ಕೂಲಿ ಹೆಂಗಸರ ಮಕ್ಕಳ ಶಿಕ್ಷಣ, ಆರೋಗ್ಯ ಮತ್ತು ಆಟಪಾಠಗಳ ಬಗ್ಗೆ ಕಾಳಜಿ ವಹಿಸುವ ಸಂಚಾರೀ ಶಿಶು ಕೇಂದ್ರಗಳಾಗಿವೆ. ಇಂದು ಸುಮಾರು 4000ಕ್ಕೂ ಹೆಚ್ಚು ಮಕ್ಕಳು, ಡೆಲ್ಲಿ, ಮುಂಬಯಿ, ಪುಣೆ ಇಂತಹ ನಗರಗಳಲ್ಲಿ ಈ ಕೇಂದ್ರಗಳಿಂದ ಲಾಭ ಪಡೆಯುತ್ತಿದ್ದಾರೆ. ಇದಕ್ಕಾಗಿ ಮೆಟ್ರಿಕ್, ಅದಕ್ಕೂ ಕಡಿಮೆ ಶಿಕ್ಷಣ ಪಡೆದ, ಸೇವಾ ಮನೋಭಾವದ ಶಿಕ್ಷಕಿಯರನ್ನು ನೇಮಿಸಿಕೊಳ್ಳಲಾಗುತ್ತದೆ. ಆಯಾಗಳೂ ಇರುತ್ತಾರೆ.

ಇದರ ಹುಟ್ಟು ಆರಂಭವಾದದ್ದು ಮೀರಾ ಮಹದೇವನ್ ಎಂಬ ಮಹಿಳೆಯಿಂದ. ಆಕೆ ಯಹೂದಿ, ತಂದೆ ನೌಕೆಯಲ್ಲಿ ಒಬ್ಬ ದಿಟ್ಟ ಮತ್ತು ನಿಷ್ಠೆಯ ಅಧಿಕಾರಿ. ಈಕೆಯ ಜನನ ಈಗಿನ ಪಾಕಿಸ್ತಾನದ ಕರಾಚಿಯಲ್ಲಿ 1929ರಲ್ಲಿ, ತಂದೆಯ ನಿಷ್ಠೆ ಮತ್ತು ದಿಟ್ಟತನ ಈಕೆಯಲ್ಲಿ ಚಿಕ್ಕಂದಿನಿಂದಲೇ ಬೆಳೆದು ಬಂತು. ಈಕೆಯ ಯಹೂದಿ ಹೆಸರು ಮಿರಿಯಮ್ ಎಂದು. ಭಾರತದ ಇಬ್ಭಾಗದ ನಂತರ ತಂದೆ ಪುಣೆಯಲ್ಲಿ ಬಂದು ನೆಲಸಿದರು. ನಂತರ ಮುಂಬಯಿಗೆ. 18 ವರ್ಷದ ಮೀರಾ, ಸ್ಟೆನೋ ಆಗಿ ಕೆಲಸಕ್ಕೆ ಸೇರಿ, ಹಿಂದಿಭಾಷಾ ಮತ್ತು ರಾಜಕೀಯ ವಾರ ಪತ್ರಿಕೆಯನ್ನು ನಡೆಸತೊಡಗಿದಳು. 1955ರಲ್ಲಿ ಹಿಂದುವಾದ ಮಹದೇವನ್‌ನೊಡನೆ ವಿವಾಹವಾಯಿತು. ಕೆಲವು ಕಾಲ ಮಕ್ಕಳ ಪೋಷಣೆ, ಬರವಣಿಗೆಯಲ್ಲೇ ಕಳೆದಿದ್ದಾಯ್ತು. ಏನನ್ನಾದರೂ ಮಾಡಬೇಕೆಂಬ ಹಂಬಲ ಕಾಡುತ್ತಲೇ ಇತ್ತು.

ಆದರೆ ತನ್ನ ಜೀವಿತದ ಬಹಳಷ್ಟು ಸಮಯ ಈಕೆ ಸಮಾಜ ಸೇವೆಯನ್ನೇನೂ ಮಾಡಿರಲಿಲ್ಲ. ಆದರೆ ತನ್ನ ಗೆಳತಿಯರನ್ನು ಗುಂಪುಗೂಡಿಸಿ, ಪ್ರವಾಸಗಳಿಗೇ ಹೋಗಿ ಬರುತ್ತಿದ್ದುದುಂಟು. ಆಕೆಯ ಎರಡು ಪುಸ್ತಕಗಳು ''ಕ್ಯಾಜಾನೇ ಫಿರ್ ಪರಾಯೆ'' ಯು ಮುಂಬಯಿಯ ದುಡಿಯುವ ಹುಡುಗಿಯರ ಬಗ್ಗೆಯಾದರೆ, ಮತ್ತೊಂದು ''ಅಪನಾ ಘರ್'' , ಭಾರತ ಮತ್ತು ಇಸ್ರೇಲ್ ನಡುವೆ ಹರಿದು ಹೋದ ಯಹೂದಿಗಳ ನಿಷ್ಠೆಯನ್ನು ತೋರಿಸುತ್ತದೆ. ಅತಿ ಚುರುಕಾದ ಯಾವಾಗಲೂ ಚಟುವಟಿಕೆಯಲ್ಲಿ ಇರಬಯಸುವ ಈಕೆಗೆ 1960ರ ನಂತರ ಬರವಣಿಗೆಯಲ್ಲೂ ಬೇಸರ ಹುಟ್ಟಿತು. ಮತ್ತೇನಾದರೂ ಮಾಡಬೇಕೆಂದು ತುಡಿಯುತ್ತಿದ್ದ ಈ ಮನಸ್ಸಿಗೆ ಸದಾವಕಾಶ ದೊರಕಿತು.

ಗಾಂಧೀಜಿ ಶತಮಾನೋತ್ಸವದ ಸಂಘಕ್ಕೆ ಈಕೆ ಸದಸ್ಯೆಯಾಗಿದ್ದಳು. ಅದಕ್ಕಾಗಿ ಕಟ್ಟಡ ನಿರ್ಮಾಣವಾಗುತ್ತಿತ್ತು. ಆ ಉತ್ಸವಕ್ಕಾಗಿ ಸಡಗರಪಡುತ್ತಿದ್ದ ಈಕೆಗೆ ಆ ಕಟ್ಟಡದಲ್ಲಿ ಕೆಲಸ ಮಾಡುತ್ತಿದ್ದ, ಕೂಲಿಗಾರರ ಕಂದಮ್ಮಗಳು, ಬಿಸಿಲು, ಮಳೆ, ಛಳಿಯಲ್ಲಿ ಈ ಅರೆಬೆತ್ತಲೆ ಮಕ್ಕಳು, ಅನಾರೋಗ್ಯ ಪರಿಸರದಲ್ಲಿ ದಿನ ದೂಡುತ್ತಿರುವುದನ್ನು ಕಂಡಳು. ಏನನ್ನಾದರೂ ಮಾಡಬೇಕೆಂಬ ಹಂಬಲಕ್ಕೆ ವಸ್ತು ಸಿಕ್ಕಿತು. ಹಿಂದೆ ಮುಂದೆ ಯೋಚಿಸದೆ ಕೈ ಹಾಕಿದ್ದೂ ಆಯಿತು. ಬಹಳಷ್ಟು ಸಮಸ್ಯೆಗಳೂ ಎದುರಾದವು. ಆದರೆ ಅದೇ ಕಟ್ಟಡದಲ್ಲಿ ತಾತ್ಕಾಲಿಕ ಶಿಶು ಸಂರಕ್ಷಣಾ ಕೇಂದ್ರವೊಂದು ಒಂದು ಡೇರೆಯಲ್ಲಿ ಈ ದಿಟ್ಟ ಮಹಿಳೆಯಿಂದ

ಪ್ರಾರಂಭವಾಗಿಯೇ ಬಿಟ್ಟಿತು. ಇದಕ್ಕಾಗಿ ಗೆಳತಿಯರಿಂದ ಧನ ಸಂಗ್ರಹವಾಯಿತು. ಹೀಗೆ 1969ರಲ್ಲಿ ಇದೇ ಮೊಟ್ಟಮೊದಲ ಸಂಚಾರೀ ಶಿಶು ಸಂರಕ್ಷಣಾ ಕೇಂದ್ರವಾಯಿತು.

ಆದರೆ ಕೂಲಿ ಹೆಂಗಸರಲ್ಲಿ ನಂಬಿಕೆ, ಧೈರ್ಯ ತುಂಬಲು ಹೆಣಗಾಡಬೇಕಾಯಿತು. ಆ ಕೂಲಿಗಾರರು ಕಟ್ಟಡ ಪೂರ್ಣವಾಗುವವರಿಗಿನ ಅವಧಿಯಲ್ಲಿ ಮಾತ್ರ ಅಲ್ಲಿರುತ್ತಿದ್ದರು. ನಂತರ ಕೆಲಸ ಹುಡುಕುತ್ತಾ ಮತ್ತೊಂದು ಜಾಗಕ್ಕೆ ಹೋಗಿಬಿಡುತ್ತಿದ್ದರು. ಹೊಲಗದ್ದೆಗಳ ಕೆಲಸ ಮುಗಿದು, 4 ತಿಂಗಳ ವಿರಾಮದ ವೇಳೆಯಲ್ಲಿ ಕೂಲಿಗಾಗಿ ನಗರಗಳಿಗೆ ರೈತಾಪಿ ಜನರೂ ಬರುತ್ತಿದ್ದರು. ಹೀಗೆ ಅವರ ನೆಲೆ ತಾತ್ಕಾಲಿಕವಾಗಿದ್ದರಿಂದ ಶಿಶು ಸಂರಕ್ಷಣಾ ಕೇಂದ್ರವೇ ಅವರನ್ನು ಹುಡುಕಿಕೊಂಡು ಅವರಿದ್ದಲ್ಲಿಗೆ ಹೋಗಬೇಕಾಯಿತು. ಆದ್ದರಿಂದ ಮೀರಾ, ಅಡಿಪಾಯ ಹಾಕಿದ್ದು ಸಂಚಾರೀ ಶಿಶು ಸಂರಕ್ಷಣಾ ಕೇಂದ್ರಕ್ಕೆ.

ಮೊದಲು ಸಂಚಾರೀ ಕೇಂದ್ರದ ಡೇರೆ ಒಂದು ದಿನ ಕುಸಿದು ಬಿತ್ತು. ಆದರೆ ಮೀರಾ ಕುಸಿಯಲಿಲ್ಲ. ಸಂಬಂಧಪಟ್ಟ ಅಧಿಕಾರಿಗಳನ್ನು ಕಂಡು, ಸಮಸ್ಯೆಗಳನ್ನು ದಿಟ್ಟತನದಿಂದ ಎದುರಿಸಿ, ಅಧಿಕಾರಿಗಳನ್ನು ಈ ಮಕ್ಕಳಿದ್ದ ಪರಿಸರಕ್ಕೇ ಕರೆತಂದಳು. ಅವರ ಮನ ಕರಗಿ, ಅವರೇ ಮುಂದಾಗಿ ನಿಂತು, ಕಟ್ಟಡದ ನಿರ್ಮಾಣದ ಆವರಣದಲ್ಲೇ ಶಿಶು ಸಂರಕ್ಷಣಾ ಕೇಂದ್ರ ನಡೆಯುವಂತೆ ಸಹಕಾರ ನೀಡಿದರು. ಹೆಂಗಸರ, ಮಕ್ಕಳ ಸಮಾಜ ಕಲ್ಯಾಣ ಮಂಡಳಿಯಿಂದ ಧನಸಹಾಯ ಒದಗಿತಲ್ಲದೆ, ಅನೇಕ ಉಡುಪಿನ ಸಂಸ್ಥೆಗಳು, ವೈದ್ಯಕೀಯ ಸಂಸ್ಥೆಗಳು ನೆರವು ನೀಡಿದವು.

ಇಷ್ಟಾದರೂ ಸೇವಾ ಮನೋಭಾವನೆಯಿಂದ ಕೆಲಸ ಮಾಡುವ ಕಾರ್ಯಕರ್ತೆಯರು ಸಿಗದೆ ತೊಂದರೆಯಾಯಿತು. ಕೂಲಿ ಹೆಂಗಸರ ಹಸುಳೆಗಳನ್ನು ತೊಳೆಯಲು, ಅವರ ಮಲ-ಮೂತ್ರಗಳನ್ನು ಬಳಿಯಲು ಆಯಾ ಗೊಣಗಿದಳು. ಮೀರಾ ಜಗ್ಗಲಿಲ್ಲ. ಸದ್ಯಕ್ಕೆ ಬೇಕಾದ ಟವಲು, ಸೋಪು, ಬಕೆಟನ್ನು ತಂದಿದ್ದಾಯ್ತು. ತಾನೇ ಆಯಾಳ ಸ್ಥಾನದಲ್ಲಿ ನಿಂತು, ಮಕ್ಕಳ ಮಲ-ಮೂತ್ರ ತೊಳೆದಳು. ನಂತರ ಎಸ್.ಎಸ್.ಎಲ್.ಸಿ.ಯನ್ನು ಮಾಡದ ಬಡಹುಡುಗಿಯರನ್ನು ಮಹಿಳೆಯರನ್ನು ಕರೆತಂದು, ಅವರಿಗೆ ತರಬೇತಿ ಕೊಟ್ಟು, ಸಂಬಳದ ಮೇಲೆ ಅವರನ್ನು ನೇಮಿಸಿಕೊಳ್ಳುವುದರಲ್ಲೂ ಯಶಸ್ವಿಯಾದಳು.

ಸಿಬ್ಬಂದಿಗೆ ಇದ್ದ ತೊಂದರೆ ಎಂದರೆ, ಈಕೆಯ ಅತಿ ಶಿಸ್ತಿನ ಸ್ವಭಾವ. ಸ್ವಲ್ಪವೂ ಹೆಚ್ಚುಕಡಿಮೆಯಾದರೆ ಸಹಿಸುತ್ತಿರಲಿಲ್ಲ. ಆದರೆ ಅವರುಗಳ ಕಷ್ಟ ಕಾಲದಲ್ಲಿ, ಅಕ್ಕನಂತೆ ನೆರವಾಗುತ್ತಾ ಅವರ ವಿಶ್ವಾಸವನ್ನು ಮೀರಾ ಗಳಿಸಿದಳು. ಈಕೆಯ ಈ ಕಾರ್ಯಕ್ಕೆ ಕ್ರಮೇಣ ಪ್ರಚಾರ ಸಿಕ್ಕಿತು. ವಿದೇಶಿ ಸಂಸ್ಥೆಗಳು ಭಾರತದಲ್ಲಿ ನಿರ್ಮಾಣವಾಗುತ್ತಿದ್ದ, ತಮ್ಮ ಕಟ್ಟಡಗಳ ಆವರಣಗಳಲ್ಲಿ ಇಂತಹ ಕೇಂದ್ರಗಳನ್ನು ತೆರೆಯುವಂತೆ, ಮೀರಾಳನ್ನು ಆಹ್ವಾನಿಸಿದವು, ನೆರವು ನೀಡಿದವು. ಜೊತೆ ಜೊತೆಗೂ ಅನಕ್ಷರಸ್ತರಿಗಾಗಿ ಸಂಜೆ ಶಾಲೆಗಳು ಹುಟ್ಟಿಕೊಂಡವು. ವಿದೇಶಿ ಮಹಿಳೆಯರೂ ಇಲ್ಲಿ ತರಬೇತಿ ಪಡೆದರು. ಮೊದಲಲ್ಲೇ ಸುಮಾರು 240 ಮಕ್ಕಳು ಈ ಕೇಂದ್ರಗಳಿಂದ ಲಾಭ ಪಡೆದವು. ಅವುಗಳಿಗೆ ಸ್ನಾನ, ಊಟ, ಶಿಕ್ಷಣ-ಎಲ್ಲವೂ ಲಭಿಸಿದವು.

ಮುಂದೆ ಕಟ್ಟಡದ ಆವರಣದಲ್ಲೇ ಕೂಲಿ ಹೆಂಗಸರ ಹಸುಳೆಗಾಗಿ ಇಂತಹ ಕೇಂದ್ರಗಳನ್ನು ಕಡ್ಡಾಯವಾಗಿ ತೆರೆಯಬೇಕೆಂದು ಪಾರ್ಲಿಮೆಂಟಿನಿಂದ ಠರಾವು ಪಾಸಾಯಿತು. ಆದರೆ ಈ ಶ್ರಮದ ಅಲೆದಾಟದಲ್ಲಿ ಮೀರಾಳ ಆರೋಗ್ಯ 1975ರ ಹೊತ್ತಿಗೆ ಕೆಟ್ಟಿತು. ಕ್ಯಾನ್ಸರ್ ರೋಗ ಆಕೆಯನ್ನು ಹಿಂಡಿತು. 1976ರಲ್ಲಿ ಆಸ್ಪತ್ರೆಯಲ್ಲಿ ನರಳುತ್ತಿದ್ದ ಮೀರಾ, ಶಿಶು ಸಂರಕ್ಷಣಾ ಕೇಂದ್ರದ ವಾರ್ಷಿಕ ಪತ್ರಿಕೆಯ ಬಗ್ಗೆ ಚರ್ಚಿಸುತ್ತಾ, ಸಲಹೆ ನೀಡುತ್ತಾ, 1977ರಲ್ಲಿ ತನ್ನ 48ನೇ ವಯಸ್ಸಿನಲ್ಲಿ ಅಸುನೀಗಿದಳು.

ಕೇವಲ 8 ವರ್ಷದ ಅವಧಿಯಲ್ಲಿ ಅಂದರೆ, ಪ್ರಾರಂಭದ ಶಿಶು ಸಂರಕ್ಷಣಾದ ಡೇರೆ ಬಿದ್ದು ಹೋದ ವರ್ಷ-1969 ರಿಂದ 1976ರ ಅವಧಿಯಲ್ಲಿ ಆಕೆಯಿಂದ ಹುಟ್ಟು ಹಾಕಲ್ಪಟ್ಟ ಸಂಚಾರೀ ಶಿಶು ಸಂರಕ್ಷಣಾ ಕೇಂದ್ರವು ಭದ್ರವಾಗಿ ಹೆಣೆದ ಸಂಸ್ಥೆಯಾಗಿ ಎಲ್ಲೆಡೆಗೂ ಹರಡಿ, ದೇಶದ ಲಕ್ಷಾಂತರ ಅತಿ ಬಡ ಜನತೆಗೆ ಸಹಾಯಕವಾಯಿತು. ಶಿಶು ಸಂರಕ್ಷಣಾ ಕೇಂದ್ರಗಳು, ತಮ್ಮ ಕಂದಮ್ಮಗಳ ಬಗ್ಗೆ, ಆತಂಕವನ್ನು ತೊರೆದು, ತಾವು ನಿರಾತಂಕವಾಗಿ ಕೆಲಸ ಮಾಡಲು ಸಹಾಯಕವಾದವೆಂದು, ಅನೇಕ ಕೂಲಿಗಾರರು ತಮ್ಮ ಸಂತೋಷ ಮತ್ತು ಅವುಗಳ ಸೇವೆ ಬಗ್ಗೆ ತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ.

# 'ದೇವೀರಿ'ಯ ಕವಿತಾ

- ಮಾಲತಿ. ಎಸ್

ಕಳೆದ ತಿಂಗಳು ಬೆಂಗಳೂರಿಗೆ ಯಾವದೋ ಸೆಮಿನಾರಿಗೆ ಹೋದವಳು 'ದೇವೀರಿ' ಚಿತ್ರವನ್ನು ನೋಡಿ ಬಂದಿದ್ದೆ. ಚಿತ್ರ ಬಹಳ ಇಷ್ಟವಾಯಿತು. ಇದಕ್ಕೆ ಮೊದಲೂ ನನಗೆ ಪರಿಚಯವಿದ್ದ ಕವಿತಾ, ಈ ಚಿತ್ರ ನೋಡಿದ ನಂತರ ಪ್ರಬುದ್ಧೆಯಾಗಿ, ಕನ್ನಡ ಸಾಂಸ್ಕೃತಿಕ ಲೋಕದ ಪ್ರಮುಖೆಯಾಗಿ ನನ್ನ ಮನಸ್ಸಿನಲ್ಲಿ ಮೂಡಲಾರಂಭಿಸಿದಳು. ಹಾಗೆಂದೇ ಕಳೆದವಾರ ಬೆಂಗಳೂರಿಗೆ ಹೋದಾಗ, ಆಕೆಯನ್ನು ಸಂದರ್ಶಿಸಿದೆ.

ಚಿತ್ರವನ್ನು ನಿರ್ದೇಸಿಸುವುದಕ್ಕೆ ಮೊದಲು, ಕವಿತಾ ಸುಮಾರು 35 ಸಾಕ್ಷ್ಯಚಿತ್ರಗಳನ್ನೂ, ಕಾರ್ಪೊರೇಟ್ ಚಿತ್ರಗಳನ್ನೂ ನಿರ್ದೇಶಿಸಿದ್ದಾರೆ. ತಾವು ನಿರ್ದೇಶಿಸಿದ ಚಿತ್ರಗಳಿಗೆ ಚಿತ್ರಕಥೆಗಳನ್ನೂ ಬರೆದಿದ್ದಾರೆ. ಇವರ ಅಡ್ವರ್‌ಟೈಸಿಂಗ್‌ನಲ್ಲಿ ಡಿಪ್ಲೊಮಾ ಮಾಡಿ, ಇಂಗ್ಲೀಷ್ ಸಾಹಿತ್ಯದಲ್ಲಿ ಎಂ.ಎ. ಮಾಡಿದ್ದಾರೆ. ತುಳಸಿ ಎಂಬ ಪರಿಸರವಾದಿಯ ಬಗ್ಗೆ, ಸಿದ್ಧಿ ಜನಾಂಗದ ಸ್ಥಿತಿಗತಿಗಳ ಬಗ್ಗೆ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಬಗ್ಗೆ, ಮಕ್ಕಳಿಗೆ ನೇಚರ್ ಕ್ಯಾಂಪ್ ಬಗ್ಗೆ,



'ದೇವೀರಿ' ಚಿತ್ರದ ಸೆಟ್‌ನಲ್ಲಿ ನಟಿ ನಂದಿತಾ ದಾಸ್, ನಿರ್ದೇಶಕಿ ಕವಿತಾ ಲಂಕೇಶ್, ನಟ ಮಂಜು ಮತ್ತು ಛಾಯಾಗ್ರಾಹಕ ಎಸ್. ರಾಮಚಂದ್ರ

ಕವಿತಾಳನ್ನು ನಾನು ಭೇಟಿಯಾದದ್ದು ಲಂಕೇಶ್ ಪತ್ರಿಕೆಯ ಕಛೇರಿಯಲ್ಲಿ. ಸುಮಾರು ಒಂದೂವರೆ ಗಂಟೆಗಳಷ್ಟು ನನ್ನೊಂದಿಗೆ ಮಾತನಾಡಿದ ಕವಿತಾ, 35ರ ಪ್ರಾಯದವಳು. ನೇರವಾಗಿ, ಜೀವಂತಿಕೆಯಿಂದ ಮಾತನಾಡಿದಳು. 'ದೇವೀರಿ'

'ಸ್ವಚ್ಛನಗರ'-ಬೆಂಗಳೂರಿನ ಬಗ್ಗೆ, ನೀನಾಸಂ ಬಗ್ಗೆ, ಹಸಕಲೆ ಬಗ್ಗೆ, ನಗರದ ಕೊಳಚೆ ಅಭಿವೃದ್ಧಿ ನಿಗಮದ ಬಗ್ಗೆ, ಕರ್ನಾಟಕದ ಪ್ರಮುಖ ಸ್ತ್ರೀಯರ ಬಗ್ಗೆ, ಕರ್ನಾಟಕ ಜನಪದ ಗಾಯಕಿರಯರ ಬಗ್ಗೆ, ಯಕ್ಷಗಾನದ ಬಗ್ಗೆ-ಇವರು ಚಿತ್ರಗಳನ್ನು

ಮಾಡಿದ್ದಾರೆ ಮತ್ತು ಅತ್ಯಂತ ಹೆಚ್ಚಿನ ಮೆಚ್ಚುಗೆಯನ್ನೂ ಪ್ರೇಕ್ಷರಿಂದ ಪಡೆದಿದ್ದಾರೆ.

ಈಗ ನಿರ್ದೇಶಿಸಿರುವ ಚಿತ್ರ 'ದೇವೀರಿ'. ಪ್ರತಿಷ್ಠಿತ ಅರವಿಂದನ್ ಪ್ರಶಸ್ತಿ ಹಾಗೂ ಇಂಟರ್‌ನ್ಯಾಷನಲ್ ಜ್ಯೂರಿ ಅವಾರ್ಡ್‌ಗಳನ್ನು ಪಡೆದುಕೊಂಡಿದೆ. ಇದಕ್ಕಾಗಿ ನಮ್ಮ ಓದುಗ ಬಳಗ ಹಾಗೂ ನಾನು, ಅವರಿಗೆ ಅಭಿನಂದನೆ ಸಲ್ಲಿಸೋಣ. ಈ ಚಲನಚಿತ್ರ ಪಿ. ಲಂಕೇಶರ 'ಅಕ್ಕ' ಕಾದಂಬರಿಯನ್ನು ಆಧರಿಸಿದೆ. ಲಂಕೇಶರೇ ಇದರ ಸಂಭಾಷಣೆ, ಹಾಡುಗಳನ್ನು ಬರೆದಿದ್ದಾರೆ. ಚಿತ್ರ ಪೂರ್ಣವಾದಾಗ ಅಪ್ಪ ಲಂಕೇಶ್ ಇದನ್ನು ನೋಡಿ ಸಂತೋಷಪಟ್ಟರೆಂದು ಕವಿತಾ ಹೇಳುತ್ತಾರೆ. ಆದರೆ, ಚಿತ್ರಕ್ಕೆ ಪುರಸ್ಕಾರ ದೊರೆತಾಗ ಅಪ್ಪ ಬದುಕಿರಲಿಲ್ಲ, ಅವರಿದ್ದರೆ.... ಎಂಬ ನೋವು ಕವಿತಾರಲ್ಲಿದೆ. 'ನಾಲ್ಕು ದಿನಗಳಿಂದ ನನ್ನಕ್ಕ ಮನೆಗೆ ಬಂದಿಲ್ಲ.... ಆ ಕತ್ತೆಲೌಡಿ' ಎಂಬ ಕೊಳಚೆ ಪ್ರದೇಶದ ಬಾಲಕನೊಬ್ಬನ ಮಾತು, ಲಂಕೇಶರನ್ನು 'ಅಕ್ಕ' ಕಾದಂಬರಿ ಬರೆಯಲು ಪ್ರೇರೇಪಿಸಿತು.

'ದೇವೀರಿ' ಚಿತ್ರದಲ್ಲಿ ನನ್ನನ್ನು ಅತಿಯಾಗಿ ಸೆಳೆದದ್ದು ಅದರಲ್ಲಿರುವ ನಿಯಂತ್ರಣ ಶಕ್ತಿ. ಅದನ್ನು ಇಂಗ್ಲೀಷ್‌ನಲ್ಲಿ **restraint** ಅನ್ನುತ್ತಾರೆ. ಅಂದರೆ, ಕೊಳಗೇರಿಯ ಬದುಕನ್ನು ಬಾಲಕನೊಬ್ಬನ ದೃಷ್ಟಿಯಿಂದ ಚಿತ್ರಿಸುವಾಗ ನಿರ್ದೇಶಕಿ ಎಲ್ಲಿಯೂ ವೈಭವೀಕರಿಸದೆ, ಅದನ್ನು ಅತ್ಯಂತ ಸಂಯಮದಿಂದ ನಿರ್ವಹಿಸಿದ್ದಾರೆ. ಈ ನಿರ್ದೇಶಕಿಯ ಸಂಯಮವೇ ಒಮ್ಮೊಮ್ಮೆ ಪ್ರೇಕ್ಷಕರ ಕಣ್ಣುಗಳಲ್ಲಿ ನೀರು ಮೂಡಲು ಪ್ರೇರೇಪಿಸುತ್ತದೆ ಎನ್ನಿಸಿತು. ಇದು ಚಿತ್ರದ ಜಯ. ಇದು ಭಾವನಾತ್ಮಕವಾಗಿ ಆಳವಾಗಿ ನನ್ನನ್ನು ಕಲಕಿತು.

ಈ ಚಿತ್ರದಲ್ಲಿ ಯಾವುದೋ ಹಳ್ಳಿಯಿಂದ ಬಂದು ನಗರದ ಕೊಳಗೇರಿಯ ಗುಡಿಸಲೊಂದರಲ್ಲಿ ತಮ್ಮನೊಂದಿಗೆ ಬಾಳುವ ದೇವೀರಿ, ತಮ್ಮ ಕ್ಯಾತ, ರಂಗಿನ ಸಿನಿಮಾ ಲೋಕದಲ್ಲಿ ಮಿನುಗುವ ತಾರೆಯಾಗಲು ಹಾತೊರೆದು ಶೋಷಣೆಗೊಳಗಾಗುವ ಪದ್ದಿ, ರೇಸ್ ಮತ್ತು ಕುಡಿತದ ಅಮಲಿನ ರಂಗಣ್ಣ, ಊದುಬತ್ತಿ ಹೊಸೆದು ನಾಲ್ಕು ಕಾಸು ಸಂಪಾದಿಸುವ ಮಕ್ಕಳಿಲ್ಲದ ಮಮತಾಮಯಿ ರಂಗಣ್ಣನ ಹೆಂಡತಿ, ಪದ್ದಿಗೆ ಸಿನಿಮಾದಲ್ಲಿ ಚಾನ್ಸು ಕೊಡಿಸಲು ಅವರಿವರ ಬಳಿ ಕೈ ಹೊಸೆಯುವ ಮತ್ತು ಮೈನೆರೆದ ತನ್ನ ಇನ್ನೊಬ್ಬ ಮಗಳನ್ನು ತಾರೆಯಾಗಿಸಲು ಪ್ರಯತ್ನಿಸುವ ಪದ್ದಿಯ ಅಪ್ಪ, ಗೂಂಡಾಗಳೂ ತಲೆಹಿಡುಕರೊಂದಿಗೆ ಸ್ಲಂ ಜನರಿಗೆ ಸಹಾಯ ಮಾಡಿ ಓಟು ಸೆಳೆಯುವ ಕನಸು ಕಾಣುವ ಪುಢಾರಿ ರಾಮಪ್ಪ, ವಿಧಿಯಂತೆ ಕನ್ನಡ ರಾಜ್ಯೋತ್ಸವ ಆಚರಿಸುವ ಮೂರ್ಖ ಕನ್ನಡ ಪ್ರೇಮಿಗಳು ಮುಂತಾದವರಿದ್ದಾರೆ. ಇವರೆಲ್ಲರನ್ನೂ ಕ್ಯಾತ, ತನ್ನ ಬಡತನದ, ಅಸಹಾಯಕತೆಯ, ಹಸಿವಿನ ಕಣ್ಣುಗಳಿಂದ ನೋಡುತ್ತಾನೆ. ಬಾಲ್ಯದ ಯಾವ ಸುಖ ಸಂತೋಷಗಳಿಲ್ಲದಿರುವ ಈ ಕ್ಯಾತನ ಬದುಕು ಪ್ರೇಕ್ಷಕರಲ್ಲಿ ನೋವಿನಲೆಯನ್ನು ಎಬ್ಬಿಸುತ್ತದೆ. ಎಲ್ಲದಕ್ಕೂ ಮೂಕಸಾಕ್ಷಿಯಾಗಿ, ಮೌನವಾಗಿ ಪೇಕ್ಷಕನೊಂದಿಗೆ ಮಾತನಾಡುತ್ತ ಓಣಿ ಓಣಿಗಳಲ್ಲಿ ಓಡುತ್ತಾ ಕೊನೆಯಲ್ಲಿ ಅನಾಥಾಶ್ರಮ ಸೇರುವ ಕ್ಯಾತನಾಗಿ ಅಭಿನಯಿಸಿರುವ ಮಂಜನ ಪಾತ್ರ ನಿರ್ವಹಣೆ ಮೆಚ್ಚುವಂತಹದ್ದು. ವಿಚಿತ್ರ ರೀತಿಯ ಅನಿವಾರ್ಯ ಬದುಕು ಸಾಗಿಸುತ್ತ ತಮ್ಮನನ್ನು ವಿಚಿತ್ರ ರೀತಿಯಲ್ಲಿ ಪ್ರೀತಿಸುತ್ತ, ಕೊನೆಯಲ್ಲಿ ತಮ್ಮನನ್ನು ಒಬ್ಬಂಟಿಯಾಗಿ ಬಿಟ್ಟು ಕಾಣೆಯಾಗುವ ದೇವೀರಿ - ಬಡತನ, ಮೌಲ್ಯ ರಹಿತ ಜೀವನ ಮನುಷ್ಯನನ್ನು ಹೇಗೆ ಕಟುಕರನ್ನಾಗಿಸುತ್ತದೆ ಎಂಬುದಕ್ಕೆ ಸಾಕ್ಷಿ.

ಕೊಳಗೇರಿಯ ಸೆಟ್‌ಅನ್ನು ಅತ್ಯದ್ಭುತವಾಗಿ ನಿರ್ಮಿಸಿರುವವರು ಕಲಾನಿರ್ದೇಶಕ ಶಶಿಧರ ಅಡಪ. ಅವರಿಗೂ ಅಭಿನಂದನೆ ಸಲ್ಲಬೇಕು.

ಇಂತಹ ಚಿತ್ರವೊಂದನ್ನು ಕೊಟ್ಟ ಕವಿತಾ, ತಮ್ಮ ತಂದೆಯ ಒಡನಾಟದಲ್ಲಿ ತಾನು ಕ್ರಿಯೇಟಿವ್ ಆಗಿ ಬೆಳೆದೆನೆಂದು ಹೇಳುತ್ತಾರೆ. ಅಪ್ಪನ ಜೊತೆ ಚಿತ್ರಗಳನ್ನು ನೋಡುವುದು, ಪ್ರತಿಯೊಂದು ಸೂಕ್ಷ್ಮಗಳನ್ನು ಚರ್ಚಿಸುವುದು- ಇವುಗಳಿಂದಲೇ ತನ್ನ ಸೂಕ್ಷ್ಮತೆಯೂ ಬೆಳೆಯಿತೆಂಧು ಹೇಳುತ್ತಾರೆ. ಪ್ರೇಮಾಕಾರಂತ್ ಕನ್ನಡದ ಮೊದಲ ಚಲನಚಿತ್ರ ನಿರ್ದೇಶಕಿಯಾದರೆ, ಕವಿತಾ ಎರಡನೆಯ ಪ್ರಮುಖ ನಿರ್ದೇಶಕಿ. ಈ ನಿರ್ದೇಶನದ ಕೆಲಸದಲ್ಲಿ ಹೆಣ್ಣಾಗಿರುವುದರಿಂದ ನಿಮಗೇನಾದರೂ ತೊಡಕಾಯಿತೇ? ಎಂದು ಕೇಳಿದಾಗ, 'ಶೂಟಿಂಗ್ ಶುರುವಾದ ಎರಡನೇ ದಿನ ಸೆಟ್‌ನಲ್ಲೇ ಅತ್ತು ಬಿಟ್ಟೆ...ಆನಂತರ ಒಬ್ಬೊಬ್ಬರನ್ನೇ ನಾನು ನಿಯಂತ್ರಿಸುತ್ತ ಹೋದೆ. ನೂರಾರು ಚಿತ್ರಗಳ ಛಾಯಾಗ್ರಾಹಕರಾಗಿರುವ ಖ್ಯಾತ ಎಸ್. ರಾಮಚಂದ್ರ ಅವರನ್ನು ಸಂಭಾಳಿಸುವುದು ಸುಲಭದ ಕೆಲಸವಾಗಿರಲಿಲ್ಲ... ಆದರೂ ನಾನು ಗೆಲ್ಲುತ್ತಾ ಹೋದೆ' ಎಂದು ಹೆಮ್ಮೆಯಿಂದ ಹೇಳಿದರು. ಒಬ್ಬ ಹೆಣ್ಣಾಗಿ ಕಲಾಮಾಧ್ಯಮದಲ್ಲಿ ಹೆಣ್ಣಿನ ಆತಂಕಗಳನ್ನೇ ಕೇಂದ್ರವಾಗಿಟ್ಟುಕೊಂಡು ಚಿತ್ರಿಸ ಬೇಕೆಂದಿರುವಿರಾ? ಎಂಬ ಪ್ರಶ್ನೆಗೆ, 'ನನ್ನನ್ನು ಯಾರೂ ಹೆಂಗಸೆಂದು ತಿಳಿದು ರಿಯಾಯಿತಿ ಕೊಡಬೇಕಾಗಿಲ್ಲ... ಹೆಂಗಸಾಗಿ ಕೆಲಸಗಳನ್ನು ನಿರ್ವಹಿಸಲು ನನಗೇನೂ ಕಷ್ಟವಾಗುವುದಿಲ್ಲ... ಮನುಷ್ಯನಿಗೆ ಸೂಕ್ಷ್ಮತೆಯಿದ್ದರೆ ಸಾಕು' ಎಂದರು. ಸಾಕ್ಷ್ಯಚಿತ್ರವೊಂದನ್ನು ಮಾಡುವಾಗ ಹತ್ತು ಹುಡುಗರೊಂದಿಗೆ ತಾನೊಬ್ಬಳೇ ಹುಡುಗಿ, ಸುಮಾರು

# 'ಕಾರ್ಯೇಷು ದಾಸಿ'

- ಶಾಂತಾ ನಾಗರಾಜ್

ಲಲ್ಲೂಪ್ರಸಾದ್‌ಯಾದವರು ಭ್ರಷ್ಟಾಚಾರದನಿಮಿತ್ತ ಜೈಲಿಗೆ ಹೋಗಬೇಕಾಗಿ ಬಂದಾಗ ತಮ್ಮ ಮುಖ್ಯಮಂತ್ರಿ ಗದ್ದುಗೆಯಲ್ಲಿ, ಮನೆಯಲ್ಲಿ ರೊಟ್ಟಿ ಬಡಿದುಕೊಂಡು, ದನಕರುಗಳ ಪೋಷಣೆ ಮಾಡಿಕೊಂಡು ಅಪ್ಪಟ ಗೃಹಿಣಿಯಾಗಿದ್ದ ರಾಬ್ಡಿದೇವಿಯನ್ನು ಕೂಡಿಸಿದ್ದು ಎಲ್ಲರಿಗೂ ತಿಳಿದಿರುವ ವಿಚಾರ. ಆಕೆ ರಾಜಕಾರಿಣಿಯಾಗಿದ್ದಳೋ ಅಥವಾ ಬಲವಂತಕ್ಕೆ ಕುರ್ಚಿ ಏರಬೇಕಾಯಿತೋ ಅಂಥ ಜಿಜ್ಞಾಸೆಗಳು ನಮ್ಮಂತಹವರಿಗೆ ಮುಖ್ಯವಾಗುವುದಿಲ್ಲ. ನಮಗೆ ಮುಖ್ಯವಾಗುವ ವಿಷಯವೆಂದರೆ ಗಂಡನ, ಅಥವಾ ಮನೆಯ ಯಜಮಾನನ ಯಾವ ಯಾವ ಅಗತ್ಯಗಳಿಗೆ ಮಹಿಳೆ ಅನುವಾಗಬೇಕೆಂದು. ನಮ್ಮ ಪೂರ್ವಜರೇನೋ ಒಂದು ದೊಡ್ಡ ಪಟ್ಟಿಯನ್ನೇ ಕೊಟ್ಟು ಬಿಟ್ಟಿದ್ದಾರೆ ಕಾರ್ಯೇಷು ದಾಸಿ, ಕರಣೇಶು ಮಂತ್ರಿ, ಇತ್ಯಾದಿ ಆದರೆ ಇಂದಿನ ಅಗತ್ಯಗಳಿಗೆ ಈ ಪಟ್ಟಿ ತುಂಬ ಚಿಕ್ಕದೆನಸುತ್ತದೆ. 'ಅಗತ್ಯೇಶು ಕುರ್ಚಿ' ತುಂಬುವ ಕೆಲಸವೂ ಮತ್ತು ಇನ್ನೂ ಏನೇನೋ ಆಗಬೇಕಾಗುತ್ತದೆ. ಅದು ಹೆಂಡತಿಗಷ್ಟೇ ಸೀಮಿತವಾಗುವುದಿಲ್ಲ. ಇಂಥ ಯಜಮಾನನ ಕರ್ತವ್ಯ ಹೊರುವಿಕೆ ಹೆಂಡತಿ ಮತ್ತು ಹೆಣ್ಣು ಮಕ್ಕಳಿಗೂ ವಿಸ್ತರಿಸಬಹುದು.

ಉದಾಹರಣೆಗೆ ನಮ್ಮ ರಸ್ತೆ ಗುಡಿಸುವ ಪೌರ ಕಾರ್ಮಿಕ ಅಂದಾನಿಯನ್ನೇ ತೆಗೆದುಕೊಳ್ಳೋಣ. ನಾನು ಅವನನ್ನು ಇಪ್ಪತ್ತು ವರ್ಷದಿಂದ ಬಲ್ಲೆ. ಮೊದಲ ದಿನ ತರುಣ ಅಂದಾನಿ ಶಿಸ್ತಾಗಿ ಉಡುಪು ಧರಿಸಿ ಪೊರಕೆ ಹಿಡಿದು ನಮ್ಮ ರಸ್ತೆಯ ಕೊನೆಯಲ್ಲಿರುವ ಕಲ್ಲಿನ ಮೇಲೆ ಕುಳಿತ ಅಷ್ಟೆ, ಅವನು ಗುಡಿಸಿದ್ದನ್ನೂ ಆ ದಿನವೇಕೆ ಯಾವ ದಿನವೂ ಯಾರೂ ನೋಡಲೇ ಇಲ್ಲ. ತಿಂಗಳಾಯಿತು ವರ್ಷ ಉರುಳಿತು. ಅಂದಾನಿಯ ಜೋಬಿಗೆ ನಗರ ಪಾಲಿಕೆಯ ಸಂಬಳ ಸೇರುತ್ತಿತ್ತು. ಜೊತೆಗೆ ನಮ್ಮ ರಸ್ತೆಯ ಕಸವೂ ಇದ್ದಲ್ಲೇ ಇರುತ್ತಿತ್ತು. ರಸ್ತೆಯವರೆಲ್ಲಾ ಬಿಡಿಯಾಗಿ, ಇಡಿಯಾಗಿ, ಗುಂಪಾಗಿ ಅವನಿಗೆ 'ಕೆಲಸ ಮಾಡು' ಎಂದು ಉಪದೇಶಿಸಿದ್ದಾಯಿತು. ಉಹುಂ ಜಪ್ಪಯ್ಯಾ ಎನ್ನಲಿಲ್ಲ. 'ಗೋರ್ಕಲ್ಲ ಮೇಲೆ ಮಳೆ'! ವಿಧಿಯಿಲ್ಲದೆ ಮೇಲಿನವರಿಗೆ ಎಲ್ಲರೂ ಸೇರಿ ತಕರಾರು ಅರ್ಜಿ ಗುಜರಾಯಿಸಿದ್ದಾಯಿತು. ಮೇಲಿನಿಂದ ತಪಾಸಣೆಗೆ ಒಂದು ನೋಟೀಸೂ ಜಾರಿಯಾಯಿತು. ಆ ವೇಳೆಗೆ ಅವನ ಕೆಲಸ ಖಾಯಂ ಆಗಿತ್ತು. ಅವನು ಅವರದೇ ಯೂನಿಯನ್ನಿನ ಮುಖಂಡನೂ ಆಗಿದ್ದ! ಈ ರಸ್ತೆಯ ಕರ್ತವ್ಯದಿಂದ ಎತ್ತಂಗಡಿ ಮಾಡಿಸುವುದಂತೂ ಕನಸಿನ ಮಾತಾಯಿತು. ಆದರೂ ತಮ್ಮ ರಸ್ತೆಯವರ ತಕರಾರು ಮತ್ತು ಮೇಲಿನವರ ನೋಟೀಸಿಗೆ ಅಂದಾನಿ ತನ್ನದೇ ಆದ ರೀತಿಯಲ್ಲಿ ಪರಿಹಾರ ಕಂಡುಕೊಂಡ. ಮದುವೆ ಮಾಡಿಕೊಂಡ ಮರುದಿನದಿಂದಲೇ ಅವನ ಹೆಂಡತಿ ಪೌರಕಾರ್ಮಿಕ ಳಲ್ಲದಿದ್ದರೂ ರಸ್ತೆ ಗುಡಿಸುವ ಗಂಡನ ಕಾರ್ಯವನ್ನು ತನ್ನ ಹೆಗಲಿಗೇರಿಸಿಕೊಂಡಳು. ಅವಳದನ್ನು ಎಷ್ಟು ನಿಷ್ಠೆಯಿಂದ ಮಾಡಿದಳೆಂದರೆ ಬಸುರಿ, ಬಾಣಂತಿತನಗಳೂ ಅವಳ ಕರ್ತವ್ಯಕ್ಕೆ ಅಡ್ಡಿ ಬರಲಿಲ್ಲ. ಗಂಡ ಕಲ್ಲಿನ ಮೇಲೆ ಕುಳಿತು ಬೀಡಿ ಸೇದುತ್ತಾ ಹಿಂದಿನ ರಾತ್ರಿ ಕುಡಿದ ಅಮಲಿನಿಂದ ಹೊರಕ್ಕೇ ಬಾರದೇ ತನ್ನದೇ ಸಾಮ್ರಾಜ್ಯದಲ್ಲಿ ವಿಹರಿಸಿಕೊಂಡು ತಿಂಗಳಿಗೊಮ್ಮೆ ಸಂಬಳ ಜೇಬಿಗೆ ಸೇರಿಸುತ್ತಿದ್ದ. ಕೃಶಕಾಯ, ಗಂಡನ ಹೊಡೆತ, ಅರೆಹೊಟ್ಟೆ ಊಟ, ಮೇಲಿಂದ ಮೇಲೆ ಹುಟ್ಟಿದ ಹೆಣ್ಣು ಮಕ್ಕಳು ಅವುಗಳ ಪೋಷಣೆ ಈ ಎಲ್ಲಾ ಜಂಜಾಟಗಳಿಂದ ಬೇಸತ್ತ ಅಂದಾನಿಯ ಹೆಂಡತಿ ಮದುವೆಯಾದ ಹದಿನೈದು ವರ್ಷಗಳಿಗೆ ಸತ್ತೇ ಹೋದಳು. ಹೆಂಡತಿ ಸತ್ತರೇನಂತೆ ಅಂದಾನಿಯ ಹೆಣ್ಣು ಮಕ್ಕಳಿದ್ದಾರಲ್ಲ! ಈಗ ಹತ್ತು ಹನ್ನೆರಡು ವರ್ಷದ ಮಗಳು ರಸ್ತೆ ಗುಡಿಸುತ್ತಾಳೆ ಥೇಟ್ ಅಮ್ಮನಂತೆಯೇ ಸೊಂಟ ಬಗ್ಗಿಸಿ ಮಾತಿಲ್ಲದೇ ಅಂದಾನಿಯ ಬೀಡಿಯ ಹೊಗೆ ಮತ್ತು ದರ್ಪಗಳನ್ನು ಸಹಿಸುತ್ತಾ !

ಒಟ್ಟಿನಲ್ಲಿ ಈ ದೇಶದಲ್ಲಿ ಒಂದು ಅಲಿಖಿತ ನಿಯಮ ತಲತಲಾಂತರದಿಂದ ನಡೆದುಕೊಂಡು ಬರುತ್ತಿದೆ. ಮನೆಯ ಯಜಮಾನ, (ಅದು ಮುಖ್ಯಮಂತ್ರಿಯ ಪದವಿಯೋ, ಬೀದಿಗುಡಿಸುವ ಕೆಲಸವೋ ಎಲ್ಲವೂ ಒಂದು ರೀತಿ ಪಾಳೆಯಗಳೇ) ಪಾಳೆಗಾರನಿದ್ದಂತೆ! ಆದರ ನಿರ್ವಹಣೆಯನ್ನು ಆ ಮನೆಯ ಮಹಿಳಾ ವರ್ಗ ಅಗತ್ಯ ಬಿದ್ದಾಗ ವಹಿಸಿಕೊಳ್ಳಲು ಸದಾ ತಯಾರಾಗಿರಬೇಕು.

ಮೊನ್ನೆ ಪತ್ರಿಕೆಯಲ್ಲಿ ಓದಿದೆ ಒಂದು ಸುದ್ದಿ ಮತ್ತಷ್ಟು ಗಾಬರಿಯನ್ನೇ ಹುಟ್ಟಿಸುತ್ತದೆ ಗುಜರಾತಿನ ಹಳ್ಳಿಯೊಂದರಲ್ಲಿ ಅತಿ ಆಳದ ಬಾವಿಗಳಿಗೆ ಕೊಡದ ಬದಲು ಸಣ್ಣಗಿರುವ ಮಹಿಳೆಯರನ್ನು ಹಗ್ಗಕ್ಕೆ ಕಟ್ಟಿ ಇಳಿಸುತ್ತಿದ್ದಾರೆ ! ಇದಕ್ಕೆ ಅವರು ಕೊಟ್ಟಿರುವ ಕಾರಣವೇನು ಗೊತ್ತೆ ? ಹೆಂಗಸರ ತೂಕ ಕಡಿಮೆ ಇರುವುದರಿಂದ!; ಅವರನ್ನು ಎಳೆದುಕೊಳ್ಳುವುದು ಸುಲಭವಂತೆ!!

ಈಗ ಹೇಳಿ 'ಕಾರ್ಯೇಷುದಾಸಿ'ಯ ಪಟ್ಟಿಗೆ ಈ ದೇಶದಲ್ಲಿ ಇನ್ನೂ ಏನೇನನ್ನು ಸೇರಿಸಬಹುದು?

□

10,000 ಮೈಲು ಕರ್ನಾಟಕದ ತುಂಬಾ ಓಡಾಡಿದ್ದನ್ನು ಹೇಳಿದರು. 'ಚಿತ್ರದ ಹಂಚಿಕೆದಾರನೊಬ್ಬ ಚಿತ್ರವನ್ನು ನೋಡಿ ಅರ್ಧಕ್ಕೇ ಎದ್ದು ಹೋದ. ಯಾಕೆಂದು ಕೇಳಿದಾಗ-ನಂದಿತಾ ದಾಸ್‌ಳಂತಹ ನಟಿಯಿರುವಾಗ ಒಂದಾದರೂ ಅಶ್ಲೀಲ ದೃಶ್ಯ ಇರಬೇಕಾಗಿತ್ತು-ಎಂಬ ತಮ್ಮ ಕೊರಗನ್ನು ತೋಡಿಕೊಂಡರು' ಎಂದು ಹೇಳಿದ ಕವಿತಾ, ಅಂತಹ ಹಂಚಿಕೆದಾರರ ದಾಳಕ್ಕೆ ತಾನು ಬಲಿಯಾಗಲಾರೆ ಎಂಬುದನ್ನೂ ಸೂಕ್ಷ್ಮವಾಗಿ ತೋರಿಸಿಕೊಂಡರು. ಕಲಾತ್ಮಕ ಚಿತ್ರಗಳನ್ನಷ್ಟೇ ಮಾಡಬೇಕೆಂಬುದು ತಮ್ಮಿಚ್ಛೆಯೇ? ಎಂದು ಕೇಳಿದಾಗ, 'ಚಿತ್ರಗಳಲ್ಲಿ ಕಲಾತ್ಮಕ, ವ್ಯಾಪಾರಿ ಎಂಬ ವಿಭಜನೆಯನ್ನು ನಾನು ಮಾಡುವುದಿಲ್ಲ, ಒಳ್ಳೆಯ ಚಿತ್ರಗಳನ್ನು ಮಾಡಬೇಕೆಂದಿದ್ದೇನೆ' ಎಂದರು. 'ನೀವು ಸಾಹಿತ್ಯದ ವಿದ್ಯಾರ್ಥಿನಿ...ಚಲನ ಚಿತ್ರವೇ ನಿಮ್ಮ ಮಾಧ್ಯಮವೆನ್ನಿಸುವುದೇ? ಎಂದು ಕೇಳಿದಾಗ, 'ನನಗೆ ಚಲನಚಿತ್ರ ನನ್ನ ಮಾಧ್ಯಮ ಎನ್ನಿಸಿದೆ...ನನಗೆ ಅದೇ ಒಂದು ಅಬ್ಸೆಷನ್...ಹುಚ್ಚು...ನನಗೆ ಪ್ರತಿಯೊಂದು ಫ್ರೇಂ ಬಗ್ಗೆಯೂ ದಿನವೂ ಕನಸುಗಳು ಬೀಳುತ್ತವೆ. ನಾನು ಅದರಲ್ಲಿ ಅಷ್ಟು ತೊಡಗಿಕೊಂಡಿರುತ್ತೇನೆ' ಅಂದರು.

ಕವಿತಾ-ಒಂದು ಆಧುನಿಕ ಯುವತಿಯ ಮಾದರಿ ಪುಸ್ತಕಗಳನ್ನು ಕೊಳ್ಳಲು ಬ್ಯಾಂಕ್ ಚೆಕ್ ಕೊಡುವ ಅಪ್ಪನಿದ್ದವಳು.... ಒಳ್ಳೆಯ ವಿದ್ಯಾಭ್ಯಾಸ ದೊರಕಿದೆ...ಒಳ್ಳೆಯ ತಾರತಮ್ಯವಿಲ್ಲದ ಪೋಷಣೆ ದೊರಕಿದೆ. ಒಂದು ರೀತಿಯಲ್ಲಿ, ಭಾರತದಂತಹ ದೇಶದಲ್ಲಿ ಹೆಣ್ಣುಗಳ ಹೀನಸ್ಥಿತಿಯನ್ನು ನೆನೆದರೆ, ಈಕೆ ಅದೃಷ್ಟವಂತೆ. ಆದರೆ, ಈಕೆಯಲ್ಲೂ ನೋವಿದೆ. ನಿಮಗೆ ಮದುವೆಯಾಗಿದೆಯೇ? ಎಂಬ ಪ್ರಶ್ನೆಗೆ 'ತಾನು ವಿವಾಹ ವಿಚ್ಛೇದನ ಮಾಡಿಕೊಂಡಿದ್ದೇನೆ ಎಂದರು. ಅಂದರೆ, ಪುರುಷಪ್ರಧಾನ ಸಮಾಜದ ಹೊಡೆತ ಇವರಿಗೂ ಬಿದ್ದಿದೆ. ವೈಯಕ್ತಿಕ ಬದುಕಿನ ಬಗ್ಗೆ ಹೆಚ್ಚು ಹೇಳಲು ಇಷ್ಟಪಡಲಿಲ್ಲ. ಆದರೆ 'ತಮಗೂ ಗಂಡ, ಮನೆ, ಮಕ್ಕಳು ಎಂಬ ಆಸೆಯಿದೆ' ಎಂದರು.

ತಾನು ಬಾಲ್ಯದಲ್ಲಿ ಅತ್ಯಂತ ಮೌನಿಯಾಗಿದ್ದೆ ಹಾಗೂ ಮುಂದೆ ತಮ್ಮ ವೈವಾಹಿಕ ಜೀವನದಲ್ಲಿನ ಸೋಲು ತಮ್ಮನ್ನು ಒಬ್ಬ ಕಲಾವಿದೆಯನ್ನಾಗಿ ರೂಪಿಸಿತು. ಅಭಿವ್ಯಕ್ತಿ ಮಾಡಬೇಕೆಂಬ ಹಂಬಲ ಬೆಳೆಯಿತು - ಎಂದರು.

ಈಗ, ಮುಂದಿನ ಚಿತ್ರ 'ಅಜ್ಜ' ಎಂಬುದರ ಬಗ್ಗೆ ಚಿಂತನ ನಡೆಸಿದ್ದಾರೆ. ವೃದ್ಧನೊಬ್ಬನನ್ನು ಕಾಡುವ ಒಂಟಿತನ, ಸಾವಿನ ಭಯ-ಈ ಚಿತ್ರದ ವಸ್ತು ಎಂದರು. ಕವಿತಾ ಇನ್ನೂ ಘಟ್ಟಿಯಾಗಿ ಬೆಳೆದು, ಕಾಲೂರು ನಿಲ್ಲಲಿ-ಎಂಬುದೇ ನಮ್ಮ ಹಾರೈಕೆ.

□

## ತಾಯಿಯೂ ಪೋಷಕಳೇ !

1999ರ ಫೆಬ್ರವರಿ 17ರಂದು ಸರ್ವೋಚ್ಚ ನ್ಯಾಯಾಲಯವು ಮಕ್ಕಳ ಪೋಷಣೆಯನ್ನು ಕುರಿತಂತೆ ಗೀತಾ ಹರಿಹರನ್ ಮತ್ತು ಡಾ। ವಂದನಾ ಶಿವ ಮೊಕದ್ದಮೆಗಳಲ್ಲಿ ನೀಡಿರುವ ತೀರ್ಪು ತಾಯಿಯ ಪಾತ್ರಕ್ಕೆ ಕೊಟ್ಟ ಮಹತ್ವದ ಹೆಜ್ಜೆಯಾಗಿದೆ. ''ತಂದೆಯೇ ಅಪ್ರಾಪ್ತ ವಯಸ್ಕ ಮಕ್ಕಳ ಸಹಜ ಪಾಲಕನಾಗಿರುತ್ತಾನೆ. ಅವನ ನಂತರ ತಾಯಿ ಪಾಲಕಳಾಗಿರುತ್ತಾಳೆ'' ಎನ್ನುವ ಕಾನೂನನ್ನು ಅರ್ಥೈಸುವಾಗ ನ್ಯಾಯಾಲಯವು ಅದರ ಹಿಂದಿರುವ ತಾರತಮ್ಯ ಧೋರಣೆಯನ್ನು ಗುರುತಿಸಿ ''ತಂದೆಯ ನಂತರ'' ಎಂಬುದಕ್ಕೆ ''ತಂದೆಯ ಅನುಪಸ್ಥಿತಿಯಲ್ಲಿ'' ಎಂದು ವಿಸ್ತಾರವಾದ ಅರ್ಥವನ್ನು ಕೊಟ್ಟಿದೆ. ಈ ತೀರ್ಪಿನ ಅನ್ವಯ ಮತ್ತು ಪರಿಣಾಮಗಳು ನಮ್ಮ ಬದುಕಿನ ವಿವಿಧ ಹಂತಗಳಲ್ಲಿ ಇನ್ನೂ ವಿಸ್ತರಿಸಬೇಕಾಗಿದೆ.

ಈ ತೀರ್ಪಿನ ಹಿನ್ನೆಲೆಯಲ್ಲಿ ಇತ್ತೀಚೆಗೆ ಕರ್ನಾಟಕದಲ್ಲಿ ಶಿಕ್ಷಣ ಇಲಾಖೆಯು ಸುತ್ತೋಲೆಯೊಂದನ್ನು ಹೊರಡಿಸಿ ವಿದ್ಯಾರ್ಥಿಗಳು ಪರೀಕ್ಷೆಗೆ ಸಲ್ಲಿಸುವ ಅರ್ಜಿಯಲ್ಲಿ ಮತ್ತು ಶಾಲೆಗೆ ಮತ್ತು ಕಾಲೇಜಿಗೆ ಸೇರುವ ಅರ್ಜಿಯಲ್ಲಿ ಪೋಷಕರ ಸ್ಥಳದಲ್ಲಿ ತಂದೆಯ ಹೆಸರಿನೊಂದಿಗೆ ತಾಯಿಯ ಹೆಸರನ್ನೂ ದಾಖಲು ಮಾಡಿಸುವ ಅವಕಾಶವಿರಬೇಕೆಂದು ನಿರ್ದೇಶಿಸಿದೆ. ಅಂತೂ ಕೊನೆಗಾದರೂ ತಾಯಿಯೂ ತಂದೆಯಷ್ಟೇ ಪೋಷಕಳೆಂದು ವಿದ್ಯಾ ಇಲಾಖೆ ಗುರುತಿಸಿತೇ ? 'ಮನೆಯ ಮೊದಲ ಪಾಠಶಾಲೆ; ಜನನಿ ತಾನೆ ಮೊದಲ ಗುರುವು' ಎಂಬ ಮಾತಿಗೆ ಇಲಾಖೆ ನೀಡುತ್ತಿರುವ ಮಹತ್ವವೆನ್ನೋಣವೆ?

# ಶೋಷಿತರ, ದೀನದಲಿತರ ಬಾಳಿಗೆ ಬೆಳಕು ನೀಡಿದ ಭಾಗ್ಯಜ್ಯೋತಿ, ಭಾರತ ರತ್ನ ಶಿಲ್ಪಿ ಡಾ। ಬಿ. ಆರ್. ಅಂಬೇಡ್ಕರ್

ಡಾ। ಬಿ. ಆರ್. ಅಂಬೇಡ್ಕರ್, ಶೋಷಿತ ಜನರ ಪ್ರಗತಿ ಮತ್ತು ಉಜ್ವಲ ಭವಿಷ್ಯಕ್ಕೆ ಹಂಬಲಿಸಿದ ದೂರದೃಷ್ಟಿಯ ಹರಿಕಾರ. ಇವರ ವಿದ್ವತ್ತು ಅಪ್ರತಿಮವಾದುದ್ದು. ಮುಂಬಯಿ ವಿಶ್ವವಿದ್ಯಾಲಯದಿಂದ ಬಿ. ಎ. ಪದವಿ, ಅಮೆರಿಕಾದ ಕೊಲಂಬಿಯಾ ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ. ಪದವಿ, ಲಂಡನ್ನಿನಲ್ಲಿ ಕಾನೂನು ಪದವಿ ಇವುಗಳು ಅಂಬೇಡ್ಕರ್‌ವರವರ ವಿದ್ವತ್ತಿಗೆ ಸಾಕ್ಷಿ. ದೀನದಲಿತರು ಅಲ್ಪಸಂಖ್ಯಾತರನ್ನು ಸಮಾಜದ ಮುಖ್ಯವಾಹಿನಿಗೆ ತರಬೇಕಾದರೆ ಅವರಿಗೆ ಒಳ್ಳೆಯ ಶಿಕ್ಷಣ ನೀಡುವುದೆ ಉತ್ತಮ ಉಪಾಯವೆಂದು ಮನಗಂಡು ಜನತಾ ಶಿಕ್ಷಣ ಸಂಸ್ಥೆಯ ಆರಂಭ, ಮುಂಬಯಿಯಲ್ಲಿ ಸಿದ್ದಾರ್ಥ ಕಾಲೇಜ್ ಸ್ಥಾಪನೆ, ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿದ್ದ ಡಾ। ಅಂಬೇಡ್ಕರ್‌ರವರು ಜಾತಿ, ಮತ, ಪಂಥದ ಪರಿಗಣನೆಯಿಲ್ಲದ ಸರ್ವರಿಗೂ ಸಮಾನ ನ್ಯಾಯ, ಸಮಾನತೆ ಮತ್ತು ಸಹಬಾಳ್ವೆ ಮಾರ್ಗದರ್ಶಿ ತತ್ವಗಳನ್ನು ಸಂವಿಧಾನದಲ್ಲಿ ಅಳವಡಿಸುವ ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಗೆ ಅವರ ದೂರ ದೃಷ್ಟಿಯೇ ಭದ್ರಬುನಾದಿ. ಆ ಮಹಾನ್ ಚೇತನದ ಜನ್ಮದಿನದಂದು ನಮ್ಮ ಗೌರವನಮನ ಸಲ್ಲಿಸಿಸೋಣ. ಶಾಂತಿ ಸಮಾನತೆಯನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳೋಣ.

**ಸಮಾಜ ಕಲ್ಯಾಣಕ್ಕಾಗಿ ಸರ್ಕಾರದ ಯೋಜನೆಗಳು :-**

1. ವಿವಿಧ ಅಭಿವೃದ್ಧಿ ಇಲಾಖೆಗಳ ಮೂಲಕ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರ ಅಭಿವೃದ್ಧಿಗೆ ವಿವಿಧ ಯೋಜನೆಗಳ ಜಾರಿಗಾಗಿ ವಿಶೇಷ ಘಟಕ ಯೋಜನೆ ಅಡಿ 442.69 ಕೋಟಿ ರೂ.ಗಳ ಅನುದಾನ ಪೂರೈಕೆ.
2. ಪ.ಜಾ, ಪ.ಪಂಗಡಗಳ ಕಾನೂನು ಪದವೀಧರರಿಗೆ ನ್ಯಾಯಾಡಳಿತದಲ್ಲಿ ತರಬೇತಿ ಮತ್ತು 4 ವರ್ಷಗಳವರೆಗೂ ಅಭ್ಯರ್ಥಿಗಳಿಗೆ ಸ್ಟೈಪಂಡ್ ಸೌಲಭ್ಯ. ಅದಕ್ಕಾಗಿ ಈಗಿರುವ 100 ಅಭ್ಯರ್ಥಿಗಳ ಸಂಖ್ಯೆಯನ್ನು 200ಕ್ಕೆ ಹೆಚ್ಚಳ.
3. ನಿರುದ್ಯೋಗಿ ಯುವಜನಾಂಗಕ್ಕೆ ಎಲೆಕ್ಟ್ರಾನಿಕ್ಸ್, ಕಂಪ್ಯೂಟರ್ ಮತ್ತಿತರ ವೃತ್ತಿ ಕ್ಷೇತ್ರಗಳಲ್ಲಿ ತರಬೇತಿ ನೀಡಲು ನವಚೇತನ ಯೋಜನೆ.
4. ಅಂಬೇಡ್ಕರ್ ವಸತಿ ಯೋಜನೆಯೂ 'ಆಶ್ರಯ' ಮನೆಗಳ ನಿರ್ಮಾಣಕ್ಕೆ ಪ್ರತಿ ಮನೆಗೆ ರೂ. 10,000-00 ಧನ ಸಹಾಯ.
5. 'ಗಂಗಾ ಕಲ್ಯಾಣ' ಯೋಜನೆಯೂ ಪ.ಜಾ, ಪ.ಪಂಗಡದವರ ಜಮೀನುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು 4.85ಕೋಟಿ ರೂ.ಗಳ ಅನುದಾನ.
6. ಹೊಸದಾಗಿ 7 ಜಿಲ್ಲೆಗಳಲ್ಲಿ ಮತ್ತೆ 7 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಆರಂಭ.
7. ಪ್ರತಿಭಾವಂತ ಪ.ಜಾ. ಪ.ಪಂಗಡಗಳ ವಿದ್ಯಾರ್ಥಿಗಳು ವಿದೇಶಗಳಲ್ಲಿ ಉನ್ನತ ವ್ಯಾಸಂಗ ಕೈಗೊಳ್ಳಲು ಪೂರ್ಣ ಪ್ರಮಾಣದ ನೆರವು.

ಬೆಂಗಳೂರಿನಲ್ಲಿ ಸರ್ಕಾರ ನಿರ್ಮಿಸಿರುವ ಡಾ. ಬಿ. ಆರ್. ಅಂಬೇಡ್ಕರ್ ಭವನದ ಉದ್ಘಾಟನೆಯನ್ನು ದಿನಾಂಕ 14-4-2000ದಂದು ಸನ್ಮಾನ್ಯ ಲೋಕಸಭಾಧ್ಯಕ್ಷರಾದ ಶ್ರೀ ಜಿ.ಎಂ.ಸಿ. ಬಾಲಯೋಗಿ ನೆರವೇರಿಸಿದ್ದಾರೆ.

**- ಕರ್ನಾಟಕ ವಾರ್ತೆ**

CPMG/KA/BG-8/99

ಭಾರತಕ್ಕೆ ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ಉನ್ನತ ಶಿಕ್ಷಣ ಪಡೆದ ಮಹಿಳೆಯರ ಸಂಖ್ಯೆ ಶೇ. 9.3 ಇದ್ದರೆ, 1998ರಲ್ಲಿ ಆ ಪ್ರಮಾಣ ಶೇ. 43.1ರಷ್ಟು ಹೆಚ್ಚಾಗಿದೆ. 1950-51 ರಲ್ಲಿ 100 ಪುರಷರಿಗೆ 14 ಮಂದಿ ಮಹಿಳೆಯರು ಉನ್ನತ ಶಿಕ್ಷಣ ಪಡೆದಿದ್ದರೆ ಈಗ 100 ಪುರುಷರಿಗೆ 52 ಮಹಿಳೆಯರು ಉನ್ನತ ಶಿಕ್ಷಣ ಪಡೆದವರಾಗಿರುತ್ತಾರೆ. ವಿವಿಧ ಪ್ರದೇಶಗಳಲ್ಲಿ ಈ ಸಂಖ್ಯೆ ಭಿನ್ನವಾಗಿರಬಹುದು. ಕೇರಳದಲ್ಲಿ ಶೇ. 52.4, ಬಿಹಾರದಲ್ಲಿ ಶೇ. 18.6, ಆಂಧ್ರಪ್ರದೇಶದಲ್ಲಿ ಶೇ. 31.5. ಮಹಿಳಾ ಕಾಲೇಜುಗಳ ಸಂಖ್ಯೆಯು ಇದೇ ರೀತಿ ಹೆಚ್ಚುತ್ತಾ ಹೋಗಿವೆ. 1986-87ರಲ್ಲಿ 780 ಇದ್ದರೆ 1996-97ರಲ್ಲಿ ಈ ಸಂಖ್ಯೆ 1195ಕ್ಕೆ ಏರಿದೆ. (ಯುಜಿಸಿ, ವಾರ್ಷಿಕ ವರದಿ, 1996-97).

**"Achala"** 108, Skyline Surabhi,
14-9, Vidyapeeta Road, BSK III Stage,
Bangalore - 560 085

**To :**

**Smt/Sri**

**Book-Post/News Letter**